# ಭಕ್ತಶಿಖಾಮಣಿ

# ದಾಮಾಜಿಪಂತ

ಬರೆದವರು :

ಜಿ. ಎನ್. ಲಕ್ಷ್ಮಣ ಪೈ, ವಿದ್ವಾನ್.

ಪ್ರಥಮ ಮುದ್ರಣ

ALLIED PUBLISHING HOUSE
MANGALORE
1936

[ಬೆಲೆ: ೧೨ ಆಣೆ.

# ಸಮರ್ಪಣೆ



ಇದೇ ಕಳೆದ ಭಾವ ಸಂವತ್ಸರದ ವೈಶಾಖ ಬ. ೧೦ (ತಾ. 7. 6. 34)ನೆ

ಪುಣ್ಯದಿನದಲ್ಲಿ ದಿವಂಗತರಾದ

ನನ್ನ ಪೂಜ್ಯ ಮಾತೃಶ್ರೀಯವರಾದ

**ಸೌ| ರುಕ್ಮಿಣೀ ಅಮ್ಮ**

ಇವರ

ದಿವ್ಯ ಚರಣಾರವಿಂದಗಳಲ್ಲಿ

ಮಾತೃಭಕ್ತಿಯ ಕಾಣಿಕೆಯಾಗಿ

ಈ ಕೃತಿಯನ್ನು ಅರ್ಪಿಸುವೆನು.

**ಜಿ. ಎನ್. ಲಕ್ಷ್ಮಣ ಪೈ**

# ಮುನ್ನುಡಿ

ಸುಮಾರು ಹದಿಮೂರು ವರ್ಷಗಳ ಹಿಂದೆ ನಾನು ಈ ನಾಟಕವನ್ನು ಬರೆದೆನು. "ಭಕ್ತವಿಜಯ"ದೊಳಗಿನ ದಾಮಾಜಿಪಂತನ ಕಥೆಯೇ ಇದರ ಮೂಲ. ಮೂಲಕಥೆಯು ಕೆಡದಂತೆ, ನಾಟಕಕಾರನಿಗಿರುವ ಹಕ್ಕಿನಂತೆ, ರಸಪೋಷಣೆಗಾಗಿ ಇದರಲ್ಲಿ ಕೆಲವು ಸನ್ನಿವೇಶಗಳು ಕೂಡಿಸಲ್ಪಟ್ಟಿವೆ. ನಾಟ್ಯ, ಸಂಗೀತಕಲೆಗಳ ಪರಿಜ್ಞಾನವುಳ್ಳ ರಸಿಕರು ಆಡಿಪಾಡಿ ಮೋದಿಸುವಂತೆ ಕೆಲವು ಹಾಡುಗಳೂ ಸಂದರ್ಭೋಚಿತವಾಗಿ ಸೇರಿಸಲ್ಪಟ್ಟಿವೆ.

೧೯೩೧ರಲ್ಲಿ ಪುತ್ತೂರು ಯುವಕಸಂಘದವರು ಇದನ್ನು ಅಭ್ಯಸಿಸಿ, ರಂಗಭೂಮಿಯಲ್ಲಿ ಪ್ರದರ್ಶಿಸಿ, ಕತ್ತಲೆಯಲ್ಲಿದ್ದ ಕೃತಿಯನ್ನು ಬೆಳಕಿಗೆ ತಂದರು. ಮಾತ್ರವಲ್ಲ, ಇದರ ಪದ್ಯಾವಳಿಯನ್ನು ಅಚ್ಚುಹಾಕಿಸಿ ಪ್ರಚುರಗೊಳಿಸಿದರು. ಯುವಕಸಂಘದವರ ಈ ಉಪಕಾರವು ಸ್ಮರಣೀಯವಾದುದೇ ಸರಿ.

ಈ ಪುಸ್ತಕದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿನೋಡಿ ಉಪಯುಕ್ತ ಸಲಹೆಗಳನ್ನಿತ್ತುದಕ್ಕಾಗಿ ಶ್ರೀ. ರಾವ್‌ಸಾಹೇಬ್ ಎಮ್. ಅನಂತರಾವ್, ಬಿ. ಎ., ಬಿ. ಎಲ್. ಇವರಿಗೂ, ನನ್ನ ಗುರುಗಳು ಶ್ರೀ. ಉಗ್ರಾಣ ಮಂಗೇಶರಾಯರಿಗೂ ನನ್ನ ವಂದನೆಗಳನ್ನರ್ಪಿಸುವೆನು. ಅಲ್ಲದೆ ಇದರ ಮುದ್ರಣ ಪತ್ರಕಗಳನ್ನು ತಿದ್ದುವಾಗ ಸಹಾಯಮಾಡಿದ ಗೆಳೆಯರಾದ ಶ್ರೀ. ವಿದ್ಯಾಪ್ರವೀಣ ಕೆ. ಸುಬ್ಬರಾಯ ಶರ್ಮ, ವಿದ್ವಾನ್, ಇವರಿಗೂ ನನ್ನ ಧನ್ಯವಾದಗಳನ್ನು ಸಲ್ಲಿಸುವೆನು.

ಗುಣಗ್ರಾಹಿಗಳಾದ ಕನ್ನಡಿಗರು ಇದರಿಂದ ಸ್ವಲ್ಪವಾದರೂ ಸಂತೋಷವನ್ನು ಹೊಂದಿದರೆ ನನ್ನ ಯತ್ನವು ಸಫಲವೆಂದೆ ಭಾವಿಸುವೆನು.

ಪುತ್ತೂರು,
ಧಾತೃ ಸಂ || ರದ ಶ್ರಾವಣ ಶುದ್ಧ ೧೦.
ತಾ. 29-7-1936.

ಜಿ. ಎನ್. ಲಕ್ಷ್ಮಣ ಪೈ

# ಈ ನಾಟಕದ ಪಾತ್ರಗಳು

**ದಾಮಾಜಿಪಂತ** — ಮಂಗಳವೇಢೆಯಲ್ಲಿ ಠಾಣೇದಾರ. (ಕಥಾನಾಯಕ)
**ಸಾವಿತ್ರಿ** — ದಾಮಾಜಿಪಂತನ ಪತ್ನಿ.
**ಮುಜುಮ್ದಾರ** — ದಾಮಾಜಿಪಂತನ ಕರಣೀಕ.
**ಶಂಕ್ರು** — ಮುಜುಮ್ದಾರನ ವಿಶ್ವಾಸಿಸೇವಕ.
**ಕಮಲೆ** — ಮಂಗಳವೇಢೆಯ ಪ್ರಸಿದ್ಧವೇಶ್ಯೆ.
**ಸುಲ್ತಾನ್ ಬಾದಷಹ** — ಬೀದರಸಂಸ್ಥಾನದ ಅರಸು.
**ವಿಠಲ** — ಪಂಢರಪುರದ ದೇವರು.
**ವಿಠೂಮಹಾರ್** — ಹೊಲೆಯನ ವೇಷತಾಳಿದ ವಿಠಲ.

ಅಲ್ಲದೆ ಸುಲೋಚನೆ (ಸಾವಿತ್ರಿಯ ದಾಸಿ), ಕುಸುಮೆ (ಕಮಲೆಯ ಗೆಳತಿ), ಒರಗಾಲಕ್ಕೀಡಾದವರು, ಸಂತರು, ಜಮಾದಾರ್ (ರಾಜಕೀಯಧಾನ್ಯಕೋಶದ ಉಗ್ರಾಣಿ), ಮಂತ್ರಿ, ಸೇನಾಪತಿ, ಕೋಶಾಧ್ಯಕ್ಷ, ವಿದೂಷಕ — ಇತ್ಯಾದಿ, ಇತ್ಯಾದಿ.

|| ಶ್ರೀರಸ್ತು ||

# ಭಕ್ತಶಿಖಾಮಣಿ

# ದಾಮಾಜಿಪಂತ

## ಒಂದನೆಯ ಅಂಕ

### ದೃಶ್ಯ ೧.

[ಸ್ಥಳ: ಮಂಗಳವೇಢೆಯ ಸರಹದ್ದಿನಲ್ಲಿ ನಿರ್ಜನಪ್ರದೇಶ. ಪತ್ನೀಪುತ್ರರನ್ನೊಡಗೊಂಡ ಒರ್ವ ಯಾತ್ರಿಕನು ಪ್ರವೇಶಿಸುವನು. ಯಾತ್ರಿಕನೂ ಆತನ ಪತ್ನಿಯೂ ಹಾಡುತ್ತಾ ಬರುವರು.]

### ಪದ ೧.

ರಾಗ: ಸಿಂಧಭೈರವಿ—ಗಜಲ್

(ಸಿರಿಧವ ವಾಸುದೇವಾ) ಎಂಬಂತೆ

ಜಯ ಜಯ ಗೋಪಬಾಲಾ, | ಮುರಲೀಧರಾ, | ದೇವಾ, |
ಮುರಸಂಹರಾ || ಪ ||

ಮುರಲೀಧರಾ, ದೇವಾ | ಮುರಸಂಹರಾ, ದೇವಾ |
ಕರುಣಾಕರಾ || ಅ. ಪ. ||

ಮಂಗಳರೂಪಾ, | ಮಂಗಳನಾಮಾ, |
ಮಂಗಳಾಕಾರಾ, | ಪ್ರೇಮಧಾಮಾ || ೧ ||

**ಯಾತ್ರಿಕ:**—ಆ ವಿಠೋಬನ ಅನುಗ್ರಹದಿಂದ ಹೇಗಾದರೂ ಇಲ್ಲಿಯತನಕ ಬಂದೆವು. ಪಂಢರಪುರವನ್ನು ಸೇರಲು ಇನ್ನೂ ಎಷ್ಟು ದಾರಿ ನಡೆಯಲಿರುವುದೋ—ಕಾಣೆ.

**ಯಾತ್ರಿಕನ ಮಗ:**—ಅಪ್ಪಾ, ಈ ಹಸಿವನ್ನು ಸಹಿಸೆನು! ಸಹಿಸೆನು!! ತಿನ್ನಲಿಕ್ಕೇನೂ ಕೊಡುವುದಿಲ್ಲವೆ? ಇನ್ನು ಒಂದು ಹೆಜ್ಜೆಯನ್ನಾದರೂ ನಾನು ಮುಂದಿಡಲಾರೆ. [ನೆಲದಮೇಲೆ ಧೊಪ್ಪನೆ ಬೀಳುವನು.]

**ಯಾತ್ರಿಕ:**—ಕಿಟ್ಟೋ, ನನ್ನೊಡನೆ ಉಳಿದಿದ್ದ ಅವಲಕ್ಕಿ ಬೆಲ್ಲವನ್ನು ಆಗಲೇ ನಿನಗೆ ಕೊಟ್ಟಿರುವೆನಲ್ಲ! ಪೇಟೆಗೆ ಹೋದಮೇಲೆ ನಿನಗೆ ಏನೇನು ಬೇಕೋ ಅದನ್ನೆಲ್ಲ ಕೊಡುವೆನು. ಈ ನಿರ್ಜನಪ್ರಾಂತದಲ್ಲಿ ನೀನು ಹೀಗೆ ಹಟಮಾಡುವುದು ಸರಿಯೋ?

**ಯಾತ್ರಿಕನ ಪತ್ನಿ:**—(ಸ್ವಗತಂ) ಹಸಿವಿಂದ ಕಂಗೆಟ್ಟ ಈ ಬಾಲಕನ ಮೊರೆಯನ್ನು ಕೇಳಲೆಂತು? (ಪ್ರಕಾಶಂ) ಕಿಟ್ಟೂ, ದೇವರ ದರ್ಶನಕ್ಕಾಗಿ, ಪುಣ್ಯಸಂಪಾದನೆಗಾಗಿ, ಹೊರಟ ನಮ್ಮಂತಹ ಯಾತ್ರಿಕರು ತಿಂಡಿಯನ್ನು ಆಶಿಸುವರೇ? ಇಲ್ಲ.

**ಕಿಟ್ಟು:**—ಅಮ್ಮಾ, ಪುಣ್ಯಸಂಪಾದನೆಗೆ ಉಪವಾಸಮಾಡಬೇಕೆಂದಾದರೆ ನಾನು ಯಾತ್ರೆಗೆ ಹೊರಡುತ್ತಲೇ ಇದ್ದಿಲ್ಲ. ಅಕ್ಕನೊಂದಿಗೆ ಮನೆಯಲ್ಲೇ ಇರುತ್ತಿದ್ದೆ!

**ಯಾತ್ರಿಕ:**—(ತೆರೆಯ ಕಡೆ ನೋಡಿ) ಅದೋ, ಯಾರೋ ಒಬ್ಬನು ಈ ಕಡೆಗೆ ಬರುತ್ತಲಿರುವನು. ಆತನು ಬಂದನಂತರ . . . .

**ಕಿಟ್ಟು:**—(ಆತುರಗೊಂಡು) ಅಪ್ಪಾ, ಅವನನ್ನು ಕೇಳು. ಜೇಬಿನಲ್ಲಿ ಏನಾದರೂ ತಿಂಡಿ ಇರಲೂಬಹುದು.

[ದಾಮಾಜಿಪಂತನ ಸೇವಕನೊರ್ವನು ಪ್ರವೇಶಿಸುವನು.]

**ಸೇವಕ:**—(ಸ್ವಗತಂ) ಇವರನ್ನು ನೋಡಿದರೆ ಯಾತ್ರಿಕರಂತೆ ಕಾಣುವರು. ಒಳ್ಳೆಯದು. ಇವರನ್ನೇ ವಿಚಾರಿಸಿ ತಿಳಿಯುವೆನು. (ಪ್ರಕಾಶಂ) ಎಲೈ ಪುಣ್ಯಾತ್ಮರೆ, ನೀವಾರು? ಈ ನಿರ್ಜನಪ್ರದೇಶದಲ್ಲಿ ಹೀಗೆ ನಿಂತಿರಲು ಕಾರಣವೇನು?

**ಯಾತ್ರಿಕ:**—ಎಲೈ ಮಹಾನುಭಾವನೆ, ಪಂಢರಪುರದ ವಿಠೋಬನ ದರ್ಶನಕ್ಕಾಗಿ ಹೋಗುತ್ತಿರುವ ಯಾತ್ರಿಕರು ನಾವು. ನಮ್ಮಾ ಬಾಲಕನು ಹಸಿವಿಂದ ಬಳಲಿ ಮುಂದೆ ನಡೆಯಲಾರೆನೆಂದು ಛಲಹಿಡಿದಿರುವನು. ಹೀಗಾಗಿ ನಿಂತಿರುವೆವು. (ಆಲೋಚಿಸಿ) ಇಲ್ಲಿಂದ ಕ್ಷೇತ್ರವು ಎಷ್ಟು ದೂರದಲ್ಲಿದೆ? ಮತ್ತು ಅಲ್ಲಿಗೆ ಹೋಗಲು ಸಮೀಪದ ದಾರಿ ಯಾವುದು?

**ಸೇವಕ:**—ಪಂಢರಪುರಕ್ಕೆ ಇನ್ನು ಹೆಚ್ಚು ದೂರವಿಲ್ಲ. ಇಲ್ಲೆ ಸಮೀಪದಲ್ಲಿ ಮಂಗಳವೇಢೆ ಎಂಬ ಗ್ರಾಮವಿದೆ. ಅಲ್ಲಿಂದ ಕ್ಷೇತ್ರಕ್ಕೆ ಐಯ್ದು ಕೊಂಬು. ನಡೆಯಿರಿ! ಈಗಲೇ ಮಂಗಳವೇಢೆಗೆ ಹೋಗೋಣ. ಅಲ್ಲಿ ನಿಮ್ಮ ಈ ಹುಡುಗನಿಗೂ ನಿಮಗೂ ಬೇಕಾದ ಊಟ, ಉಪಚಾರಗಳನ್ನು ಮಾಡಿಸಬಲ್ಲೆ.

**ಯಾತ್ರಿಕ:**—(ಆಲೋಚಿಸಿ) ಭಕ್ತಶಿರೋಮಣಿ ದಾಮಾಜಿಪಂತರು ಮಂಗಳವೇಢೆಯಲ್ಲಿ ಇರುವರಲ್ಲವೆ?

**ಸೇವಕ:**—ಅಹುದು. ನಾನು ಈಗ ಕರೆದೊಯ್ಯುವುದೂ ಅವರ ಮನೆಗೆ. ನಾನು ದಾಮಾಜಿಪಂತರ ಸೇವಕನು. ನಿಮ್ಮಂತಹ ಯಾತ್ರಿಕರನ್ನೂ ಅತಿಥಿ ಅಭ್ಯಾಗತರನ್ನೂ ಉಪಚರಿಸಿ ಸನ್ಮಾನಿಸುವುದೇ ನನ್ನ ಕರ್ತವ್ಯವು. ನಡೆಯಿರಿ. ಹೋಗೋಣ.

**ಕಿಟ್ಟು:** — ಅಪ್ಪಾ, ಈ ಹಸಿವನ್ನು ಸಹಿಸಲಾರೆ! ಕಾಲುಗಳು ಬಿಚ್ಚಿಹೋಗಿವೆ. ನಡೆಯಲಾರೆ!

**ಯಾತ್ರಿಕ:** — ಬಾ, ನನ್ನ ಹೆಗಲನ್ನೇರು. (ಕಿಟ್ಟುವನ್ನು ತನ್ನ ಹೆಗಲಮೇಲೇರಿಸುವನು.)

[ಎಲ್ಲರೂ ಹೋಗುವರು.]

## ದೃಶ್ಯ ೨.

[ಸ್ಥಳ: ಮಂಗಳವೇಷ್ಠೆ. ಠಾಣೆದಾರ ದಾಮಾಜಿಪಂತನ ಕಚೇರಿ. ದಾಮಾಜಿಪಂತನೂ ಅವನ ಕರಣೀಕ(ಗುಮಾಸ್ತ)ನಾದ ಮುಜುಮುದಾರನೂ ಕುಳಿತಿರುವರು.]

**ದಾಮಾಜಿ:** — (ಲೆಕ್ಕಪುಸ್ತಕವನ್ನು ಮಗಚಿನೋಡಿ) ಮುಜುಮದ್ದಾರರೆ, ಹಲವು ಪಟ್ಟಣಿಗರೂ ಹರದರೂ ಭೂಕಂದಾಯವನ್ನಾಗಲೀ ವೃತ್ತಿತೆರಿಗೆಯನ್ನಾಗಲೀ ನಿಯಮಿತರೀತಿಯಲ್ಲಿ ಕೊಡದೆ ಬಾಕಿಮಾಡಿಕೊಂಡಿರುವರಲ್ಲ! ದುರ್ಭಿಕ್ಷವು ದಿನೇ ದಿನೇ ಹೆಚ್ಚಾಗುತ್ತಲಿರುವುದೇ ಇದಕ್ಕೆ ಕಾರಣವಲ್ಲವೆ?

**ಮುಜು:** — ಹೌದು, ಸ್ವಾಮೀ! ಮಳೆಯಿಲ್ಲದೆ ಬೆಳೆಯು ಸುಟ್ಟುಹೋದುದರಿಂದ ಕೃಷಿಕರು ಕಂಗೆಟ್ಟು ತಮ್ಮ ಹೊಟ್ಟೆಪಾಡನ್ನು ಸಾಗಿಸಲು ಕೂಡ ಅಸಮರ್ಥರಾಗಿರುವರು. ಇನ್ನು ವ್ಯಾಪಾರಿಗಳಾದರೊ ಕೃಷಿಕರನ್ನು ಅವಲಂಬಿಸಿಕೊಂಡಿರತಕ್ಕವರು. ಬೇಸಾಯಕ್ಕೆ ಬಂದ ದುರ್ಭಿಕ್ಷವು ಅವರ ವ್ಯಾಪಾರಕ್ಕೆ ದೊಡ್ಡ ಸೊನ್ನೆಯನ್ನೇ ತಂದಿರುವುದು. ಹೀಗಾಗಿ ಅವರ ರೋದನವು ಕೇಳಲಸಾಧ್ಯವಾಗಿದೆ.

**ದಾಮಾಜಿ:** — ನಿಜ. ಸತ್ಯವನ್ನೇ ಹೇಳಿದಿರಿ. ಜನರ ಅವಸ್ಥೆಯು ತೀರಾ ಭಯಂಕರಸ್ಥಿತಿಗೆ ಬಂದಿಳಿದಿರುವುದು. ದುರ್ಭಿಕ್ಷದ ದೆಸೆಯಿಂದ ದಾರಿದ್ರ್ಯವೂ, ದಾರಿದ್ರ್ಯದೋಷದಿಂದ ಜನರ ಹಾಹಾಕಾರವೂ ಹೆಚ್ಚಾಗುತ್ತಲಿರುವುದು.

## ಪದ ೨.

ರಾಗ: ತೋಡಿ — ತ್ರಿವಟ

(ಸುಗಮುವ ತಾ ಗೈದನೆಂದು) ಎಂಬಂತೆ

ಬಡತನದಾ ಕಷ್ಟದಿಂದ । ನಡುಗುತಿದೆ ಲೋಕವು ॥
ತಡೆಯಲಾರದಲೆ ಮರುಕವನನುಮಾ । ಇಡುತಿರ್ಪುದು ಮೊರೆಯಾ ॥ ಪಲ್ಲ ॥

ಜನರಧಿಕ ಮಂಗುಡದಿಂದ । ಅನುಗೆಡುತೆ ಅಳಲ್ವರು ॥
ಮನದೆ ನೊಂದು ಜೀವವ ಪಿಡಿದಿರುವಾ । ಪೆಣದಂತಿಹರಾಹಾ ॥ ೧ ॥

[ಒರ್ವ ಸೇವಕನು ಪ್ರವೇಶಿಸುವನು.]

**ಸೇವಕ:**— ಮಹಾಸ್ವಾಮಿಾ, ದೊಡ್ಡಮನೆ ನೀಲಯ್ಯನು ದ್ವಾರದಲ್ಲಿ ಕಾಯುತ್ತಿರುವನು.

**ದಾಮಾಜಿ:**— ಆತನನ್ನು ಒಳಗೆ ಬರಮಾಡು.

**ಸೇವಕ:**— ಅಪ್ಪಣೆ. [ಹೋಗುವನು.]

[ಕಂಬಳಿ ಹೊದ್ದುಕೊಂಡು, ಕೈಯಲ್ಲೊಂದು ಕೋಲುಹಿಡಿದಿರುವ ನೀಲಯ್ಯನು ಪ್ರವೇಶಿಸುವನು.]

**ನೀಲಯ್ಯ:**— (ಅಡ್ಡಬಿದ್ದು) ಪಂತ್ ಮಾರಾಜ್ರಿಗೆ ಈ ಬಡೋನು ಅಡ್ಡ ಬೀಳ್ತಾನ್ರಿ ಬುದ್ದಿ.

**ದಾಮಾಜಿ:**— ಏನಯ್ಯಾ — ನೀಲಯ್ಯಾ ಇದೇನು? — ನಿನ್ನ ಮುಖವು ಬಹಳ ಬಾಡಿರುವಂತೆ ಕಾಣುವುದಲ್ಲ!

**ಮುಜು:**— (ಸ್ವಗತಂ) ಈ ಮೂರ್ಖನು ಕೈಬಿಸಿಮಾಡುವೆನೆಂದು ಹಲವು ಸಾರಿ ಹೇಳಿ ನನ್ನನ್ನು ವಂಚಿಸಿರುವನು. ಇದುವರೆಗೆ ಒಂದು ದುಗ್ಗಾಣಿಯನ್ನಾದರೂ ಕೊಟ್ಟುದಿಲ್ಲ. ಹೇಗಾದರೂ ಇವನಿಗೆ ಬುದ್ಧಿಕಲಿಸಬೇಕಾಗಿದೆ. (ಪ್ರಕಾಶಂ—ಗಂಭೀರ ಧ್ವನಿಯಿಂದ) ಏನೋ — ನೀಲಯ್ಯಾ! ಇನ್ನೂ ನಿನ್ನ ಕಂದಾಯವನ್ನು ಸಲ್ಲಿಸದಿರಲು ಕಾರಣವೇನು?

**ನೀಲಯ್ಯ:**— ಏನ್ರಿ ಬುದ್ದಿ — ಕೋಪಾ ಮಾಡಬ್ಯಾಡಿ.

**ಮುಜು:**— ನೀನು ಯಾವಾಗಲೂ ಹೇಳುವುದೇ ಹಾಗೆ. ಸೊಗಸಾದ ಮಾತುಗಳಿಂದ ಬೇರೆಯವರನ್ನು ವಂಚಿಸಲು ನೀನು ಬುದ್ಧಿವಂತ ಹೌದು — ಗೊತ್ತುಂಟು.

**ನೀಲಯ್ಯ:**— ಇಲ್ರೀ ಬುದ್ದಿ. ಮಳೆಯಿಲ್ದೆ ಈ ಕಾಲಾ ಬೆಳೆ ಹಾಳಾಯ್ತ್ರಿ, ಬುದ್ದಿ (ಕಣ್ಣನೊರಸಿ ಅಳುವನು).

**ದಾಮಾಜಿ:**— (ಮುಜುಮದ್ದಾರನನ್ನು ಕುರಿತು) ಮುಜುಮ್ದಾರರೆ, ಕಂದಾಯದಲ್ಲಿ ಇವನಿಂದ ಬರತಕ್ಕ ಹಿಂದಿನ ಬಾಕಿ ಎಷ್ಟು?

**ಮುಜು:**— ತುಂಬಾ ಬಾಕಿ ಉಂಟು. ಈತನು ಮಹಾಕಪಟಿ. ಬೇಕೆಂದೇ ಅಳುವನ್ನು ನಟಿಸಬಲ್ಲನು. ಈ ವರ್ಷವೇನೊ ಬೆಳೆಯು ಹಾಳಾಗಿರಬಹುದು ನಿಜ. ಆದರೆ ಕಳೆದ ವರ್ಷ ಮತ್ತು ಆಚೆ ವರ್ಷ ಪೈರು ಚೆನ್ನಾಗಿತ್ತಷ್ಟೆ! ಆ ಎರಡು ವರ್ಷಗಳಲ್ಲಿಯೂ ಈತನು ಸುಳ್ಳು ನೆವಗಳನ್ನು ಹೇಳಿ, ವಾಯಿದೆಯನ್ನು ಕೇಳಿ, ಈವರೆಗೂ ಹಿಂದಿನ ಬಾಕಿಯನ್ನು ಸಲ್ಲಿಸಲಿಲ್ಲ.

**ದಾಮಾಜಿ:**—ನೀಲಯ್ಯಾ, ಹಿಂದಿನ ಬಾಕಿಯನ್ನಾದರೂ ನೀನು ಕೊಡ ಬಹುದಿತ್ತಲ್ಲ!

**ನೀಲಯ್ಯ:**—ಏನ್ ಹೇಳೊದ್ರಿ ಬುದ್ದಿ—ನಂಗೆ ಬಲ್ ದೊಡ್ಡ ಸಂಸಾರ. ಮುವ್ವೋರು ಗಂಡುಮಕ್ಳು ಐವ್ವೋರು ಹೆಣ್‌ಮಕ್ಳು. ಕಳ್ದ ವರ್ಸಾ ನನ್ ಚಿಕ್ಕಮ್ಣಿಗೆ ಮದ್ವೆಯಿತ್ರಿ. ಇನ್ನೂ ಮದ್ವೆ ಸಾಲ ತೀರಲ್ಲಾ ಬುದ್ದಿ (ಕಣ್ಣನೊರಸಿ ಗಟ್ಟಿಯಾಗಿ ಅಳುವನು).

**ದಾಮಾಜಿ:**—ಛೆಛೆ! ಹಾಗೆ ರೋದಿಸಬೇಡಾ.

**ಮುಜು:**—ಸ್ವಾಮಿ, ಸಾಲಮಾಡಿ ಮಗಳ ಮದುವೆಮಾಡಿದೆನೆಂದು ಹೇಳುವನಲ್ಲ! ಈತನ ದುಂದುಗಾರಿಕೆಗೆ ಏನು ಹೇಳಬೇಕು? ಹಿಂದಿನ ಕಂದಾಯ ವನ್ನು ಕೊಡದಿದ್ದರೆ ಈತನಿಗೆ ತಕ್ಕ ಶಿಕ್ಷೆಯನ್ನೇ ವಿಧಿಸಬೇಕು.

**ದಾಮಾಜಿ:**—ಮುಜುಮ್ದಾರರೆ, ಈತನು ಸರಳಹೃದಯನು. ಹಿಂದಿನ ಬಾಕಿಯನ್ನು ಬರುವ ವರ್ಷ ಈತನಿಂದ ವಸೂಲುಮಾಡೋಣ.

**ನೀಲಯ್ಯ:**—(ಸ್ವಗತಂ) ಸರ್ಗದ ಬಾಗ್ಲಿಗೆ ನರ್ಕದ ನಾಯಿ—ಹಾಂಗೆ ಪಂತ್ರ ಹತ್ರ ಈ ಕರ್ಣೀಕ.

**ಮುಜು:**—(ಸ್ವಗತಂ) ನನ್ನ ಮಾತುಗಳೇನೂ ನಡೆಯುವಂತಿಲ್ಲ. ಇರಲಿ. (ಪ್ರಕಾಶಂ) ಸ್ವಾಮಿ, ಬರುವ ವರ್ಷವಾದರೂ ನೆವಹೇಳದಂತೆ ಈಗಲೇ ಈತನನ್ನು ಎಚ್ಚರಿಸುವುದೊಳ್ಳೆಯದು.

**ದಾಮಾಜಿ:**—ನೀಲಯ್ಯಾ, ಸುಲ್ತಾನ್ ಬಾದಷಹರ ಶಾಸನವನ್ನು ಮೀರಿ ನಡೆಯಲು ಸಾಧ್ಯವಿಲ್ಲ. ಹಿಂದಿನ ಬಾಕಿಯನ್ನು ಸಂಪೂರ್ಣವಾಗಿ ಬರುವ ವರ್ಷದಲ್ಲಿ ನೀನು ಸಲ್ಲಿಸಲೇ ಬೇಕು. ಈ ವರ್ಷದ ಕಂದಾಯ ನಿನ್ನ ಮಟ್ಟಿಗೆ ರದ್ದುಮಾಡಿಸುವ ಪ್ರಯತ್ನವನ್ನು ನಾವು ಮಾಡುತ್ತೇವೆ. ಗೊತ್ತಾಯಿತೆ?

**ನೀಲಯ್ಯ:**—ಆಯ್ತ್ರಿ ಬುದ್ದಿ. ನಿಮ್ಮ ಅಪ್ಣಿಹಾಂಗೆ ಮಾಡ್ತೀನಿ. (ಸ್ವಗತಂ) ಹೆಂಗಾದ್ರು ಈ ವರ್ಸ ಬದ್ಕೊಂಡೆ. ಬರ್ವ ವರ್ಸ ನಾನು ಬದ್ಕೊಂಡ್ರೆ—ಆ ಸುದ್ದಿ! (ಪ್ರಕಾಶಂ) ಪಂತ್ ಮಾರಾಜ್ರಿಗೆ—ಕರ್ಣಿಕ್‌ರಿಂಗೆ—ಅಡ್ಡಬೀಳ್ತೀನ್ರಿ ಬುದ್ದಿ—ನಂಗೆ ಅಪ್ಣೆ ಆಗ್ಲಿ. (ಅಡ್ಡಬೀಳುವನು.)

**ದಾಮಾಜಿ:**—ಸರಿ. ನೀನಿನ್ನು ಹೋಗಬಹುದು. (ಮುಜುಮ್ದಾರನನ್ನು ಕುರಿತು) ಮುಜುಮ್ದಾರರೆ, ಜನತೆಯ ಪರವಾಗಿ ನಾವು ಒಂದು ಮನವಿಯನ್ನು ತಯಾರಿಸಿ ಬಾದಷಹರಿಗೆ ಕಳುಹಿಸಿಕೊಡಬೇಕಾಗಿದೆ. ಅದರಲ್ಲಿ ಈ ವರ್ಷದ ಕ್ಷಾಮವನ್ನು ವಿವರಿಸಿ, ಜನರು ಕಂದಾಯತೆರಿಗೆಗಳನ್ನು ತೆರಲು ಅಶಕ್ತರಾಗಿರುವ ವಿಷಯವನ್ನೂ ಸರಕಾರದ ರಿಯಾಯತಿಯನ್ನು ಅವರು ಅಪೇಕ್ಷಿಸುವ ವಿಚಾರ

ವನ್ನೂ ಬರೆಯಬೇಕು. ಈ ಕೆಲಸವನ್ನು ನೀವು ನಿರ್ವಹಿಸಬೇಕು. [ಎದ್ದು ಹೋಗುವನು.]

**ಮುಜು:**— (ಸಗತಂ) ಏನು ಮನವಿಯೋ—ದೇವರೇ ಬಲ್ಲ! ನಮ್ಮ ಕ್ಷೇಮ ಚಿಂತನೆ ಆದಮೇಲಲ್ಲವೆ ಬೇರೆಯವರದು! (ತಲೆಯಲ್ಲಾಡಿಸಿ ನಿಟ್ಟುಸಿರಿಡುವನು.)

[ಪರದೆ ಬೀಳುವುದು.]

## ದೃಶ್ಯ ೨.

[ದಾಮಾಜಿಪಂತನ ಮನೆ. ದಾಮಾಜಿಯ ಪತ್ನಿಯಾದ ಸಾವಿತ್ರಿಯು ಹಾಡುತ್ತಾ ದೇವರಿಗೆ ಪ್ರಾರ್ಥನೆಮಾಡುತ್ತಿರುವಳು.]

### ಪದ ೨.

ರಾಗ: ಸಿಂಧುಭೈರವಿ—ಕೇರವಾ
(ನಾ ಪ್ರಾರ್ಥಿಸುವೆ ಗುರುರಾಯಾ) ಎಂಬಂತೆ

ನಾ ಪ್ರಾರ್ಥಿಪೆನು ಜಗದೀಶಾ, | ಲಕ್ಷ್ಮೀಶಾ ಪಾಲಿಸೈ || ಪಲ್ಲ ||

ಭವಬಂಧನವನ್ನಾದರಿಸಿ, |
ತವ ನಾಮೋಚ್ಚರಣೆಯ ತ್ಯಜಿಸಿ, |
ತಪೆ ವಿಷಯಗಳೊಳ್ ಮನ ಚಲಿಪುದಕಟ—
ಲಕ್ಷ್ಮೀಶಾ ಪಾಲಿಸೈ || ೧ ||

ಮಂದರಗಿರಿಧರ, ಪರಮೇಶಾ, |
ಸುಂದರ, ಮುರಹರ, ಸರ್ವೇಶಾ, |
ಚಂದದಿ ಶಿರಬಾಗುತೆ ಮಣಿವೆ ನಿನಗೆ—
ಲಕ್ಷ್ಮೀಶಾ ಪಾಲಿಸೈ || ೨ ||

ಹೇ ಜಗದೀಶ್ವರಾ! ದಯಾನಿಧೇ!! ವಿಶ್ವಕರ್ತನೂ, ವಿಶ್ವಭರಿತನೂ, ವಿಶ್ವಪಾಲನೂ ಆಗಿರುವ ನಿನ್ನ ವಿವಿಧವಿಲಾಸಗಳನ್ನು ಬಣ್ಣಿಸಲು ಸಾವಿರ ನಾಲಗೆಯುಳ್ಳ ಮಹಾಶೇಷನಿಗೂ ಅಸಾಧ್ಯವೆನಲು, ಅಬಲೆಯಾದ ಈ ದೀನಳು ನಿನ್ನನ್ನು ಹೇಗೆ ಕೊಂಡಾಡುವಳೊ! ಆದರೆ ದೇವಾ! ಅಷ್ಟುಮಾತ್ರಕ್ಕೆ ನೀನು ನಸುನಗೆ ಬೀರಿ ಪರಿಹಾಸ್ಯಮಾಡಬೇಕೆ? ಬೇಡ. ಅಪಾರಮಹಿಮನಾದ ನೀನು ಭಕ್ತಸುಲಭನೆಂಬ ವಿಚಾರವನ್ನು ಈಕೆ ಚೆನ್ನಾಗಿ ಬಲ್ಲಳು. ಅದೇ ನಿನ್ನನ್ನು ಪ್ರಾರ್ಥಿಸುತ್ತಿರುವಳು. ಎಂದೆಂದೂ ಪ್ರಾರ್ಥಿಸುವಳು. ನೀನಾದರೂ ಈಕೆಯ ಪ್ರಾರ್ಥ

ನೆಗೆ ಕಿವಿಗೊಟ್ಟು ಇವಳನ್ನು ಉದ್ಧರಿಸು! [ದೇವರ ಮೂರ್ತಿಗೆ ಪ್ರಣಾಮಗೈದು ಮುಂದೆ ಬರುವಳು.]

[ಯಾತ್ರಿಕರನ್ನೊಡಗೊಂಡು ಸೇವಕನು ಪ್ರವೇಶಿಸುವನು.]

**ಸೇವಕ:**—(ಯಾತ್ರಿಕರನ್ನು ಕುರಿತು) ವಿಶ್ರಮಿಸಿರಿ. (ಸಾವಿತ್ರಿಯನ್ನು ಕುರಿತು) ಅಮ್ಮಾ, ಪಂಢರಪುರದ ಯಾತ್ರಿಕರಿವರು. ಇವರಲ್ಲಿ ಆ ಬಾಲಕನು ಹಸಿವಿಂದ ಬಹಳವಾಗಿ ಬಳಲಿರುವನು. ಊಟಕ್ಕೆ ಮೊದಲು ಸ್ವಲ್ಪ ತಿಂಡಿಯನ್ನು ಅವನಿಗೆ ಕೊಡಿಸಬೇಕು.

**ಸಾವಿತ್ರಿ:**—ಹಾಗೆಯೇ ಮಾಡುವೆನು. (ತೆರೆಯ ಕಡೆ ನೋಡಿ) ಸುಲೋಚನಾ! ಸುಲೋಚನಾ!!

[ಸುಲೋಚನೆಯು ಪ್ರವೇಶಿಸುವಳು.]

**ಸಾವಿತ್ರಿ:**—ಸುಲೋಚನಾ, ಎರಡು ಗೋಧಿರೊಟ್ಟಿಯನ್ನೂ ಒಂದೆರಡು ಕಿತ್ತಳೆಹಣ್ಣುಗಳನ್ನೂ ಮೊದಲು ಈ ಬಾಲಕನಿಗೆ ತಂದುಕೊಡು.

[ಸುಲೋಚನೆಯು ಒಳಪ್ರವೇಶಿಸಿ ತಿನಿಸುಗಳನ್ನು ತಂದು ಕಿಟ್ಟುವಿಗೆ ಕೊಡುವಳು.]

**ಸಾವಿತ್ರಿ:**—(ಯಾತ್ರಿಕನ ಪತ್ನಿಯನ್ನು ಕುರಿತು) ಅಮ್ಮಾ, ನಿಮ್ಮೆಲ್ಲರ ಆಗಮನದಿಂದ ಬಹಳ ಸಂತೋಷವಾಯಿತು.

## ಪದ ೪.

ರಾಗ: ತಿಲಕಕಾಮೋದ—ತ್ರಿವಟ

ಭಗಿನಿ, ಮೋದದೊಳ್ | ನಮ್ಮಾತಿಥ್ಯವ |
ಸ್ವೀಕರಿಸಿ ನೀವ್ | ತೋಷಗೊಳ್ಳುದೌ || ಪಲ್ಲ ||
ಮಾರ್ಗಾಯಾಸದಿ | ಬಳಲಿದಿರಕಟಾ |
ಶೀಘ್ರದೊಳಾರೋ | ಗಣೆಮಾಡುವುದೌ || ೧ ||

**ಯಾತ್ರಿಕನ ಪತ್ನಿ:**—ಎಲೌ ಸಾಧ್ವೀಮಣಿಯೆ, ವಿನಯದಿಂದೊಪ್ಪುವ ನಿನ್ನ ಶೀಲವು ಪ್ರಶಂಸನೀಯವಾಗಿದೆ.

**ಸಾವಿತ್ರಿ:**—(ಸುಲೋಚನೆಯನ್ನು ಕುರಿತು) ಸುಲೋಚನಾ, ಇವರಾದರೊ ಮಾರ್ಗಾಯಾಸದಿಂದ ದಣಿದವರು. ವಿಳಂಬಮಾಡದೆ ಭೋಜನೋಪಚಾರದಿಂದ ಇವರನ್ನು ಸತ್ಕರಿಸು.

**ಸುಲೋಚನಾ:**—ಹೂಂ. (ಯಾತ್ರಿಕರನ್ನು ಕುರಿತು) ಬನ್ನಿ! [ಯಾತ್ರಿಕರನ್ನೊಡಗೊಂಡು ಒಳಪ್ರವೇಶಿಸುವಳು.]

[ದಾಮಾಜಿಪಂತನು ಪ್ರವೇಶಿಸುವನು. ಸಾವಿತ್ರಿಯು ಅತನ ಕಾಲುಗಳನ್ನು ತೊಳೆದು, ಉದಕವನ್ನು ತನ್ನ ತಲೆಯಮೇಲೆ ಪ್ರೋಕ್ಷಿಸುವಳು.]

**ದಾಮಾಜಿ:**—ದೇವಿ, ಹೆಚ್ಚಿನ ಕಾರ್ಯವಿದ್ದುದರಿಂದ ಇಂದು ಮನೆಗೆ ಬರಲು ಸ್ವಲ್ಪ ವಿಳಂಬವಾಯಿತು. ಬೇಸರವಿಲ್ಲವಷ್ಟೆ!

**ಸಾವಿತ್ರಿ:**—ಪ್ರಾಣೇಶಾ, ಇದೇಕೆ ಹೀಗೆನ್ನುತ್ತಿರುವಿರಿ? ತ್ರಿಕರಣಪೂರ್ವಕವಾಗಿಯೂ ತಮ್ಮನ್ನೇ ಅನುವರ್ತಿಸುವ ನನಗೆ ತಮ್ಮ ನಡತೆಯ ವಿಷಯದಲ್ಲಿ ಬೇಸರವುಂಟೆ?

**ದಾಮಾಜಿ:**—(ಆಲೋಚಿಸಿ) ಪತ್ನೀಪುತ್ರಸಮೇತನಾದ ಒರ್ವ ಯಾತ್ರಿಕನು ನಮ್ಮ ಅತಿಥಿಯಾಗಿರುವನೆಂದು ಸೇವಕನಿಂದ ತಿಳಿದಿದ್ದೆನು. ಅತಿಥಿಗಳೆಲ್ಲಿ?

**ಸಾವಿತ್ರಿ:**—ಊಟಕ್ಕೆ ಹೋಗಿರುವರು. (ತೆರೆಯ ಕಡೆ ನೋಡಿ) ಅವರೇ ಇತ್ತ ಬರುತ್ತಲಿರುವರು.

[ಯಾತ್ರಿಕನೂ ಕಿಟ್ಟುವೂ ಪ್ರವೇಶಿಸುವರು.]

**ದಾಮಾಜಿ:**—(ತಲೆಬಾಗಿ) ಅತಿಥಿಗಳಿಗೆ ಪ್ರಣಾಮವು. ಬನ್ನಿ, ವಿಶ್ರಮಿಸಿರಿ.

[ಎಲ್ಲರೂ ಕುಳಿತುಕೊಳ್ಳುವರು.]

**ಯಾತ್ರಿಕ:**—ದಾಮಾಜಿಪಂತರೆ, ದಾರಿನಡೆದು ಬಹಳವಾಗಿ ಬಳಲಿದ್ದೆವು. ನಿಮ್ಮ ಅನುಗ್ರಹದಿಂದ ದಣುನಿವಾರಿಸಿದೆವು.

**ದಾಮಾಜಿ:**—ನನ್ನ ಅನುಗ್ರಹವೇನು?

## ಪದ ೫.

ರಾಗ: ಕಾಮೋದ—ತ್ರಿವಟ
(ಜಗದವನಾ ಬಹುಭಾರ) ಎಂಬಂತೆ

ಸಿರಿವರನಾ ಸುರರಾಜರಾಜನಾ ।
ದಯಾಮಯನ ಪರಮಾತ್ಮನ ಕರುಣದಿ ।
ಲೋಕವು ಚಲಿಪುದು ನೋಡೆ ॥ ಪಲ್ಲ ॥

ಪ್ರತ್ಯೇಕಾತ್ಮನೊಳಾತ ನೆಲಸಿ ತಾಂ ।
ನಿತ್ಯ ಪ್ರೇರಿಸಿ ಕರ್ಮಗೈಸುವನು ॥
ಸತ್ಯವಿದನು ತಿಳಿಯುತಲರ್ಪಿಪ ತ ।
ನ್ನಾತ್ಮನ ಬುಧನವಗೆ ॥ ೧ ॥

**ಯಾತ್ರಿಕ:**—ಆಹಾ! ನಿಮ್ಮ ವಾಕ್ಸುಧೆಯು ಅತಿಮಧುರವಾಗಿರುವುದು.

**ದಾಮಾಜಿ:**—ಈಗ ಭಜನೆಗೆ ಸಮಯವಾಯಿತು. ಭಜನೆಮಾಡೋಣವೆ?

**ಯಾತ್ರಿಕ**:— ಬಹಳ ಸಂತೋಷ.

[ದಾಮಾಜಿಪಂತನು ಮೊದಲು ಹಾಡಿ ಮತ್ತೆ ಯಾತ್ರಿಕನೂ ಕಿಟ್ಟುವೂ ಅನು ಕರಿಸುವರು.]

## ಪದ ೬.

ರಾಗ: ಬೃಂದಾವನಸಾರಂಗ— ಕೇರವಾ

ಹರೇ ಪಾಂಡುರಂಗಾ, | ವರದ, ಶುಭಾಂಗಾ |
ಸುರಗಣಸಂಗಾ, | ಕರುಣಾಪಾಂಗಾ || ೧ ||

ನತಜನಪಾಲಾ, | ಧೃತವನಮಾಲಾ, |
ನುತಗುಣಶೀಲಾ, | ಕೃತಗೋಪಾಲಾ || ೨ ||

ಭಕ್ತಸುಪ್ರೀತಾ, | ಮುಕ್ತಿಪ್ರದಾತಾ, |
ಲಕ್ಷ್ಮಣವಿನುತಾ, | ಲಕ್ಷ್ಮೀನಾಥಾ || ೩ ||

[ದಾಮಾಜಿಪಂತನೊರ್ವನೆ ಈ ಕೆಳಗಿನ ಗೀತವನ್ನು ಹಾಡುವನು.]

## ಪದ ೭.

ರಾಗ: ಕೇದಾರ— ಝಂಪೆ

(ಏನೀಗ ನಾ ಗೈವೆ) ಎಂಬಂತೆ

ಪರಮಾತ್ಮ ನೀನೆನ್ನ | ತಾಯಿಯಾ ಕತದಿಂದ |
ಕರುಣೆಯಿಂ ಮಮತೆಯಿಂ | ಪಾಲಿಸೈ ಎನ್ನ || ಪ ||

ತಾಯಿಹಕ್ಕಿಯು ನೀನು | ಕಿರುಮರಿಯು ನಾನೆನಲು |
ಕಾಯುತಂ ಸಂಪದದ | ತಿನಿಸನೂಡುವುದೈ || ೧ ||

ಹಸು ನೀನು ಪ್ರೇಮದಾ | ಎಳಗರುವು ನಾನೆನಲು |
ಒಸೆದು ತಿಳಿವಿನ ಬೆಳಕ | ಹಾಲ ಕುಡಿಸುವುದೈ || ೨ ||

ಪಡೆದ ಮಾತೆಯು ನೀನು | ಕಿರುಕಂದ ನಾನೆನಲು |
ಪಿಡಿದೆನ್ನ ಕರವ ಭವ | ಶರಧಿ ದಾಂಟಿಪುದೈ || ೩ ||

[ಆರತಿಯೆತ್ತಿ, ಎಲ್ಲರಿಗೂ ಕೊಟ್ಟು, ನೈವೇದ್ಯವನ್ನು ಹಂಚುವನು.]

[ಘರದೆ ಬೀಳುವುದು.]

## ದೃಶ್ಯ ೪.

[ಸ್ಥಳ: ಮಂಗಳವೇಢೆಯ ಸಮೀಪದಲ್ಲಿ ನಿರ್ಜನಪ್ರದೇಶ. ಮುಜುಮ್ದಾರನು ತನ್ನ ವಿಶ್ವಾಸಿಸೇವಕನಾದ ಶಂಕ್ರುವಿನೊಡನೆ ಪ್ರವೇಶಿಸುವನು.]

**ಮುಜು:**—ಶಂಕ್ರೂ, ಠಾಣೆದಾರ ದಾಮಾಜಿಪಂತರು ಜನರ ಮೇಲೆ ಏನು ಮಂಕುಎರಚಿರುವರೋ ಕಾಣೆ! ಎಲ್ಲರ ಬಾಯಲ್ಲೂ ಠಾಣೆದಾರರ ಸುದ್ದಿಯೇ ಹೊರತು ಈ ಮುಜುಮ್ದಾರನ ಪ್ರಸ್ತಾವವೇ ಇಲ್ಲ. ನಾನು ಯಾವುದರಲ್ಲಿ ಕಡಮೆ?—ವಿದ್ಯೆಯಲ್ಲಿಯೆ? ಬುದ್ಧಿಯಲ್ಲಿಯೆ? ರೂಪವೇಷಾದಿಗಳಲ್ಲಿಯೆ? ಆ ದಾಮಾಜಿಯವರಂತೆ "ಪಾಂಡುರಂಗ ಹರಿ ವಿಠ್ಠಲ್" ಎಂದು ಒದರಿ, ತಾಳ ಬಡಿದು ಕುಣಿಯುವುದು, ಹರಿಕೀರ್ತನೆಯಂತೆ!—ಏನೇನೊ ಬಾಯಿಗೆ ಬಂದಂತೆ ಹರಟುವುದು, ತಾನು ದೊಡ್ಡ ಮನುಷ್ಯನೆಂದು ತೋರ್ಪಡಿಸಿ ಜನರಿಂದ ಹೂ ಮಾಲೆಯನ್ನು ಹಾಕಿಸಿಕೊಳ್ಳುವುದು—ಇಂತಹ ಮಾಟವಿದ್ಯೆ ಮಾತ್ರ ನನಗೆ ತಿಳಿಯದು. ನಮ್ಮ ಜನರಿಗಾದರೂ ಏನು ಹುಚ್ಚು!—ದಾಮಾಜಿಯವರು ಭಕ್ತ ಶಿಖಾಮಣಿಗಳಂತೆ! ವಿಭೂತಿಪುರುಷರಂತೆ!!—ಈ ರೀತಿಯಲ್ಲಿ ಮನಸ್ಸೀ ಮಾತನಾಡಿ ಅವರ ಮನೆಗೆ ಹೂ, ಹಣ್ಣುಹಂಪಲ, ತರಕಾರಿಯ ಹೊರೆಗಳು ಇತ್ಯಾದಿಗಳನ್ನು ಸಾಗಿಸುವರಲ್ಲ! ಅವರಿಗೇನು ಹೇಳಬೇಕು? ತಾಳಹಿಡಿದು ಕುಣಿಯದ ಮಾತ್ರಕ್ಕೆ ಅವರು ನನ್ನನ್ನು ಅಲಕ್ಷಿಸಬೇಕೆ?

**ಶಂಕ್ರು:**—ಬುದ್ಧಿ, ನಾಸರಿಯುನೇ? ಎಲ್ಲಾ ಕಾರ್ಯಭಾರವನ್ನು ನಡೆಯಿಸಬೇಕು—ಮುಜುಮ್ದಾರರು! ಹೆಸರಿಗೆ, ಕೀರ್ತಿಗೆ—ಠಾಣೆದಾರರು! ಜನರ ಮಾತು ಹಾಗಿರಲಿ. ಕಳೆದ ಸರ್ತಿ ಸುಲ್ತಾನ್ ಪಾಚ್ಛಾಯರೇ ಇಲ್ಲಿಗೆ ಚಿತ್ತೈಸಿದ್ದಾಗ ದಾಮಾಜಿಯವರನ್ನು ಮನಸಾರೆ ಹೊಗಳಿದರಲ್ಲ!—ಯಾಕೆ? ಭಜನೆಮಾಡಿ ಕುಣಿಯುವ ಆ ಠಾಣೆದಾರರಿಗೆ ನಿಮ್ಮಂತೆ ಲೆಕ್ಕಪತ್ರಗಳನ್ನು ಚೊಕ್ಕವಾಗಿಡಲು ಗೊತ್ತುಂಟೆ? ಕಂದಾಯವನ್ನು ವಸೂಲುಮಾಡುವ ಸಾಮರ್ಥ್ಯವುಂಟೆ?—ಏನೋ ಏನೋ. ನೀವು ಹೇಳಿದಂತೆ ಸಂತರೆಂದು ಕುಣಿದು ಭಜನೆಮಾಡುವ ಅವರ ಆಟವು ಎಲ್ಲರೂ ಅವರನ್ನೊಲಿಯುವಂತೆ ಮಾಟಮಾಡುತ್ತಿರಬೇಕು.

**ಮುಜು:**—ಅಹುದು. ಬಾದಷಹರಿಗೂ ದಾಮಾಜಿಯವರೆಂದರೆ ಅಚ್ಚುಮೆಚ್ಚಿನವರು! ಮಂತ್ರಿಗಳೂ ಹೇಳುವರಂತೆ—ದಾಮಾಜಿಯವರಂತಹ ಯೋಗ್ಯ ಹುದ್ದೆದಾರರು ಅಪರೂಪವೆಂದು! ಹೀಗಾಗಿ ರಾಜದರ್ಬಾರಿನಲ್ಲಿಯೂ ಅವರದೇ ಪ್ರತಾಪ—ಅವರ ಮಾತೇ ನಡೆಯುವುದು. (ಆಲೋಚಿಸಿ) ಅವರು ಮಾಡುತ್ತಿರುವ ಈ ಮಾಟವನ್ನು ಕೊನೆಗಾಣಿಸಬೇಕು. ಇಲ್ಲದಿದ್ದರೆ ಈ ಮುಜುಮ್ದಾರನನ್ನು ನೋಡುವವರೇ ಇಲ್ಲವೆಂದಾಗುವುದು.

ಶಂಕ್ರು:— ಒಡೆಯರೇ, ಕೋಪಿಸದಿರಿ. ಹಿಂದೆ ಹಲವು ಬಾರಿ ನೀವು ಹೀಗೆ ಮಾತಾಡಿದುದುಂಟು. ಆದರೆ ಇದುವರೆಗೂ ಏನೂ ಮಾಡಿದುದಿಲ್ಲ. ಠಾಣೆದಾರರ ಸತ್ವವನ್ನೇ ಹೀರುವಂತಹ ಉಪಾಯವನ್ನು ಹುಡುಕಿ, ಅವರು ದುರ್ಗುಣಗಳೂ ದುರಾಚಾರಿಗಳೂ ಎಂದು ಲೋಕಕ್ಕೆ ವ್ಯಕ್ತಪಡಿಸಿದರೆ ಮಾತ್ರ ಅವರಿಗೆ ಅವನತಿಯು ಪ್ರಾಪ್ತವಾಗುವುದು. ಅಲ್ಲದೆ ಅವರ ಅವನತಿಯೇ ನಿಮ್ಮ ಉನ್ನತಿಗೆ ಸಾಧಕವಾಗುವುದು.

ಮುಜು:— ಶಂಕ್ರೂ, ನಿನ್ನ ಆಲೋಚನೆಯು ವಿಹಿತವಾದುದು. ಅದೇ ಆಲೋಚನೆಯು ಎಷ್ಟೋ ಸಮಯದಿಂದ ನನ್ನ ತಲೆಯಲ್ಲಿ ಕೆಲಸಮಾಡುತ್ತಿದೆ. ಇತ್ತಲಾಗೆ ಕಾರ್ಯಸಾಧನೆಗೆ ಒಂದು ಉಪಾಯವನ್ನೂ ಗುಣಿಸಿ ಇಟ್ಟಿರುವೆನು. ನಿನ್ನ ಸಹಾಯವಿದ್ದಲ್ಲಿ ನಾನು ಅದರಲ್ಲಿ ಜಯಶೀಲನಾಗಬಹುದು.

ಶಂಕ್ರು:— ಧನಿಯವರೇ, ಇದೇನು ಹೀಗೆ ಹೇಳುವಿರಿ? ನನ್ನ ಸಹಾಯ ಬಾಕಿಯಾಗಿ ನಿಮ್ಮದೊಂದು ಕಾರ್ಯವು ನೆರವೇರದಿರುವುದೇ! "ಬಾವಿಗೆ ಹಾರು" ಎಂದು ನೀವು ಹೇಳಿದರೆ ತತ್ಕ್ಷಣವೇ ಹಿಂದುಮುಂದು ನೋಡದೆ ಹಾರುವವನು ನಾನಲ್ಲವೆ?

ಮುಜು:— ಶಹಭಾಸ್! ಶಂಕ್ರೂ, ಶಹಭಾಸ್!! ಹೀಗಿರುವುದರಿಂದಲೇ ನೀನು ನನಗೆ ಅತ್ಯಂತವಿಶ್ವಾಸಿಯಾಗಿರುವೆ. ಎಂತಹ ಅಂತರಂಗವನ್ನಾದರೂ ನಿನ್ನೊಡನೆ ಹೇಳದಿದ್ದರೆ ನನಗೆ ನಿದ್ದೆ ಬಾರದು.

ಶಂಕ್ರು:— ಪ್ರಕೃತ ನನ್ನಿಂದಾಗಬೇಕಾದ ಕಾರ್ಯವೇನು? ಹೇಳೋಣಾಗಲಿ.

ಮುಜು:— ನನ್ನ ಕಾರ್ಯಸಾಧನೆಯ ಸಂಪೂರ್ಣ ಮರ್ಮವನ್ನು ಮೊದಲು ನಿನಗೆ ಹೇಳುತ್ತೇನೆ. ಮತ್ತೆ ನೀನು ಮಾಡಲಿರುವ ಕಾರ್ಯಭಾಗವನ್ನು ನೀನೇ ತಿಳಿಯುವೆ. ಜನರಿಗೆ ದಾಮಾಜಿಯವರ ಮೇಲಣ ಅತಿವಿಶ್ವಾಸವು ತಪ್ಪಬೇಕಾದರೆ ನೀನು ಹೇಳಿದಂತೆ ಅವರು ದುರ್ನಡತೆಯವರೆಂದು ಪ್ರಕಟವಾಗಬೇಕು. ಅವರನ್ನು ಉಪಾಯಾಂತರದಿಂದ ದುರಭ್ಯಾಸಕ್ಕಿಳಿಸಿ, ಅವರು ದುರ್ಗುಣಿಯೆಂದು ನಾವು ಬಹಿರಂಗಪಡಿಸಿದೊಡನೆಯೇ ಈಗ ಅವರನ್ನು ಪ್ರೀತಿಸುವವರೇ ಅವರಿಗೆ ಇದಿರಾಗುವರು. ಮತ್ತೆ ಆ ವಿಚಾರವನ್ನು ನಾವು ಬಾದಷಹರ ಕಿವಿಗೆ ಹಾಕಬೇಕು. ಆಗ ಸಮ್ರಾಟರು ಮುನಿದು ಅವರನ್ನು ಠಾಣೆದಾರ ಹುದ್ದೆಯಿಂದ ನಿವೃತ್ತಿಗೊಳಿಸುವರು. ಮತ್ತೆ ಆ ಅಧಿಕಾರಕ್ಕೆ ಯೋಗ್ಯರಾರು? ಅನುಭವದ ಮಟ್ಟಿನಿಂದಾಗಲೀ ಕಾರ್ಯದಕ್ಷತೆಯ ರೀತಿಯಿಂದಾಗಲೀ ಅದು

ನನಗೇ ಸಿಕ್ಕುವುದು. ಮತ್ತೆ ಶಂಕ್ರ್ರೂ, ನನ್ನ ಭಾಗ್ಯವು ನಿನ್ನ ಪುಣ್ಯವೆಂದು ತಿಳಿ. ಎಲ್ಲಾ ವಿಷಯದಲ್ಲಿಯೂ ನೀನೇ ನನ್ನ ಬಲಗೈಯಾಗುವೆಯಂತೆ!

**ಶಂಕ್ರ್ರ:**—ಭೇಷ್! ಆ ಮೇಲೆ . . . . .

**ಮುಜು:**—ಆ ಮೇಲೆ ಅಲ್ಲ. ಅದಕ್ಕೆ ಮೊದಲು ನಾವು ಮೆದುಳನ್ನುಪಯೋಗಿಸಿ ಕೆಲಸಮಾಡಬೇಕಾಗಿದೆ. ದಾಮಾಜಿಯವರನ್ನು ದುರಾಚಾರಕ್ಕೆಳಿಸಲು ನಾನು ಬಗೆದ ಉಪಾಯವನ್ನು ಹೇಳುತ್ತೇನೆ. ನಮ್ಮೂರಿನ ಪ್ರಸಿದ್ಧ ವೇಶ್ಯೆಯಾದ ಕಮಲಾಸಾನಿಯನ್ನು ಬಲ್ಲೆಯಷ್ಟೆ!

**ಶಂಕ್ರ್ರ:**—(ಆಲೋಚಿಸಿ) ಒಹೋ, ಆ ಸೂಳೆ ಕಮಲೆ—ಅಲ್ಲವೆ?

**ಮುಜು:**—ಹೌದು, ಹೌದು. ನಾವು ದಾಮಾಜಿಯವರನ್ನು ಅವಳ ಮೋಹದ ಬಲೆಗೆ ಕೆಡಹಬೇಕು.

**ಶಂಕ್ರ್ರ:**—(ಆಲೋಚಿಸಿ) ಅದು ಸಾಧ್ಯವೇ?

**ಮುಜು:**—ಅಯ್ಯೋ, ಮಹಾರಾಯಾ! ಎಂತೆಂತಹ ಘೋರಕಾರ್ಯಗಳನ್ನು ಮಾಡುವ ನೀನೇ ಹೀಗೆ ಮಾತನಾಡಿದರೆ . . .

**ಶಂಕ್ರ್ರ:**—(ದರ್ಪದಿಂದ) ಭಯಂಕರಕೃತ್ಯಗಳನ್ನು ಈಗಲೂ ಮಾಡಬಲ್ಲೆ! ಅವರ ಮನೆಗೆ ಕನ್ನಹಾಕಬೇಕೆ? ದರೋಡೆಮಾಡಬೇಕೆ? ಅಥವಾ ಅವರಿಗೆ ಖೂನಿಮಾಡಬೇಕೆ? ಹೇಳಿರಿ.

**ಮುಜು:**—(ಕಿವಿಮುಚ್ಚಿ) ಅವೆಲ್ಲ ದುಡುಕುತನದ ಕೆಲಸಗಳು! ಪತ್ತೆಯಾದರೆ ನಮ್ಮನ್ನು ಸೆರೆಮನೆಗೆ ಒಯ್ಯುವ ಕಾರ್ಯಗಳು!! ಆಲೋಚಿಸಿ ನೋಡು—ನಾವು ಯಾವುದರಲ್ಲಿಯೂ ಯಾವ ರೀತಿಯಲ್ಲಿಯೂ ಸಿಕ್ಕಿಬೀಳದೆ, ತೆರೆಯ ಮರೆಯಲ್ಲಿದ್ದು ಅವರ ಅವನತಿಯನ್ನು ತರುವುದರಲ್ಲಿದೆ ನಮ್ಮ ಬುದ್ಧಿವಂತಿಕೆ!

**ಶಂಕ್ರ್ರ:**—(ತಲೆಯಲ್ಲಾಡಿಸಿ) ಹೂಂ. ಅದೂ ಹೌದು.

**ಮುಜು:**—ವಿಶ್ವಾಮಿತ್ರನಂತಹ ಸನ್ಯಾಸಿಯು ಕೂಡ ಮೇನಕೆಯ ಮೋಹದ ಬಲೆಗೆ ಬಿದ್ದು ಸೋತಿರುವನೆಂದಮೇಲೆ ಸಾಮಾನ್ಯಮನುಷ್ಯ ಈ ದಾಮಾಜಿಯವರ ಪಾಡೇನು? "ದಾಮಾಜಿಯವರಿಗೆ ಪರಸ್ತ್ರೀಯರು ಅಕ್ಕತಂಗಿಯರ ಹಾಗೆ" ಎಂದು ಜನರಾಡಿಕೊಳ್ಳುವುದನ್ನು ನೀನೂ ನಂಬಿದ ಹಾಗೆ ಕಾಣುತ್ತದೆ. ಏನೋ—ಏನೋ—

**ಶಂಕ್ರ್ರ:**—ಕಮಲೆಯ ಪ್ರೇಮಪಾಶಕ್ಕೆ ಸಿಕ್ಕುವಂತೆ ದಾಮಾಜಿಯವರನ್ನು ಅವಳಲ್ಲಿಗೆ ಕರೆದೊಯ್ಯುವುದು ಹೇಗೆ? ಅವರು ಸೂಳೆಯ ಮನೆಗೆ ಹೋಗುವರೇ?

**ಮುಜು:**—(ಮೆಚ್ಚಿನಿಂದ) ಈಗ ದಾರಿಗೆ ಬಂದೆ. ಅವಳಲ್ಲಿಗೆ ಅವರು ಹೋಗುವಂತೆ ಏರ್ಪಡಿಸುವುದರಲ್ಲಿದೆ ನಮ್ಮ ಜಾಣ್ಮೆ. ನೋಡು!—ಹರಿಕಥೆ

ಯೆಂದರೆ ದಾಮಾಜಿಯವರಿಗೆ ಬಹಳ ಇಷ್ಟ. "ಉತ್ತರ ಅಥವಾ ದಕ್ಷಿಣ ಪ್ರಾಂತದ ಹರಿದಾಸರೊಬ್ಬರ ಹರಿಕೀರ್ತನೆ ತನ್ನ ಮನೆಯಲ್ಲಿ ಜರಗಲಿರುವುದ ರಿಂದ ಚಿತ್ತೈಸಬೇಕು" ಎಂದು ಕಮಲೆಯು ಅವರಿಗೆ ಆಮಂತ್ರಣವಿತ್ತರೆ, ಅವರು ಅವಳಲ್ಲಿಗೆ ಹೋಗಿಯೇ ಹೋಗುವರು. ಬೇಕಾದರೆ ಕೀರ್ತನೆಯನ್ನು ಹಗಲಲ್ಲೆ ಅಪರಾಹ್ನ ನಾಲ್ಕು ಘಂಟೆಯ ಸಮಯಕ್ಕೆಂದು ಇಡಬಹುದು.

**ಶಂಕ್ರು:**—(ಆಲೋಚಿಸಿ) ಹಾಗೆ ಅವಳು ಆಮಂತ್ರಣಕೊಡಲು ನಮ್ಮೂರಿಗೆ ಯಾವ ಹರಿದಾಸರು ಬಂದಿರುವರು?

**ಮುಜು:**—ಅಯ್ಯೋ, ಮಹಾರಾಯಾ! ಹರಿದಾಸರು ಬರುವುದೇ ಬೇಡ! ಅವಳು ಹಾಗೆ ಸುಳ್ಳು ಬರೆದು ಆಮಂತ್ರಿಸಬೇಕು. ಅವರು ಮನೆಗೆ ಬಂದನಂತರ ತನ್ನ ರೂಪುಲಾವಣ್ಯ, ಹಾವಭಾವ, ಒಯ್ಯಾರಬೆಡಗುಗಳಿಂದ ಅವರನ್ನು ವಶವರ್ತಿಯಾಗಿ ಮಾಡಿಕೊಳ್ಳಬೇಕು. ತಿಳಿಯಿತೇ?

**ಶಂಕ್ರು:**—ಈಗ ಗೊತ್ತಾಯಿತು. ಈಗಲೇ ಹೋಗಿ ಕಮಲಾಸಾನಿಯೊಡನೆ ಈ ವಿಚಾರವನ್ನು ಹೇಳುತ್ತೇನೆ.

**ಮುಜು:**—ಹಾಗೆಲ್ಲ ದುಡುಕಿದರೆ ಪ್ರಯೋಜನವಿಲ್ಲ. ನಿನ್ನ ಮಾತಿಗೆ ಅವಳು ಬೆಲೆಕೊಡಳು. (ಬೆರಳಿನ ಉಂಗುರವನ್ನು ತೆಗೆದು) ಇದೋ, ಇಂದು ಒಬ್ಬ ಜಮಿನುದಾರನಿಂದ ನಾನು ಸಂಪಾದಿಸಿದ ಉಂಗುರವಿದು. ಇದನ್ನು ಕಮಲೆಗೆ ಕೊಟ್ಟು ಏನೋ ಅತ್ಯಗತ್ಯಕಾರ್ಯವಿರುವುದರಿಂದ ಇಂದು ರಾತ್ರಿ ಸುಮಾರು ಹತ್ತು ಘಂಟೆಯ ಹೊತ್ತಿಗೆ ನಮ್ಮ ಮನೆಗೆ ಬರಬೇಕೆಂಬ ನನ್ನ ವಿನಂತಿಯನ್ನು ಆಕೆಗೆ ತಿಳಿಸು. [ಉಂಗುರವನ್ನು ಕೊಡುವನು] ಬರುವಾಗಲೂ ಹೋಗುವಾಗಲೂ ನೀನು ಅವಳ ಜೊತೆಯಲ್ಲಿರು. (ಕಿಸೆಯಿಂದ ಎರಡು ರೂಪಾಯಿ ತೆಗೆದು) ಇದೋ, ಸದ್ಯಃ ಎರಡೇ ರೂಪಾಯಿ ಉಂಟು. ಇದು ನಿನಗಿರಲಿ. [ರೂಪಾಯಿ ಕೊಡುವನು.]

**ಶಂಕ್ರು:**—(ಸಂತೋಷದಿಂದ ಹಿಗ್ಗಿ) ಬುದ್ಧಿ, ನಿಮ್ಮ ಅಪ್ಪಣೆಯಂತೆ ನಡೆದುಕೊಳ್ಳುತ್ತೇನೆ. ಸಾಯಂಕಾಲವಾಯಿತು. ಹೋಗಲೇ?

**ಮುಜು:**—ಹೋಗು. ನೇರಾಗಿ ಕಮಲೆಯ ಮನೆಗೆ ನಡೆ! ನಮ್ಮ ಈ ಹಂಚಿಕೆ ಒಂದು ನುಸಿಗೂ ಗೊತ್ತಾಗಬಾರದು. ಜಾಗ್ರತೆ!

**ಶಂಕ್ರು:**—ಆಯ್ತು, ಒಡೆಯರೇ! [ಹೋಗುವನು.]

**ಮುಜು:**—(ಸ್ವಗತಂ) ಸಾಧಿಸಿದರೆ ಸಬಳ ನುಂಗಬಹುದಂತೆ! ಠಾಣೇದಾರನಾಗಿ ಮೆರೆಯಲು ಸಾಧ್ಯವುಂಟೊ ಇಲ್ಲವೊ ನೋಡುತ್ತೇನೆ! ಈಗ ನನ್ನನ್ನು ಅಲಕ್ಷಿಸುವವರೇ, ತುಚ್ಛೀಕರಿಸುವವರೇ ನನ್ನ ಕಾಲಿಗೆರಗುವಂತೆ ಮಾಡುತ್ತೇನೆ!!

ನನ್ನ ಪೌರುಷವನ್ನು ಅವರು ಆಗ ತಿಳಿಯುವರು! (ಯೋಚಿಸುತ್ತಿರುವ) ಸಾಹಸದಲ್ಲಿ ಈ ಮುಜುಮ್ದಾರನು ಕಡಮೆಯೆ? ಇನ್ನು ಮನೆಗೆ ಹೊರಡೋಣ. (ಆಲೋಚಿಸಿ) ಈ ದಿವಸ ಸೀರೆಯನ್ನು ತರಲೇಬೇಕೆಂದು ನಮ್ಮಾಕೆ ಹೇಳಿದ್ದಳಲ್ಲವೇ? ಆಕೆಗೆ ಝರ ತಾರಿ ಸೀರೆ ಬೇಕಂತೆ! ನನ್ನ ಈ ಕರಣೀಕಕೆಲಸದಲ್ಲಿ ಅವಳನ್ನೊಲಿಸುವುದೇ ಕಷ್ಟವಾಗಿದೆ. ಏಕೆಂದರೆ ಝರತಾರಿ ಸೀರೆಗೆ ಎಂಭತ್ತು ರೂಪಾಯಿ ಬೆಲೆಯಂತೆ! ಅಷ್ಟು ಹಣವನ್ನು ಎಲ್ಲಿಂದ ಕೊಡಲಿ? ಹೇಗೂ ಇರಲಿ. ನಾನು ಠಾಣೇದಾರ ನಾಗುವತನಕ ಸ್ವಲ್ಪ ಸಮಾಧಾನವಹಿಸಬೇಕೆಂದು ಅವಳನ್ನು ಕೇಳಿಕೊಂಡ ರಾಯಿತು. [ಹೋಗುವನು.]

## ದೃಶ್ಯ ೫.

[ಮುಜುಮ್ದಾರನ ಮನೆ. ಅವನ ಪತ್ನಿಯಿರುವಳು.]

**ಮುಜು. ಪತ್ನಿ:**—(ತೆರೆಯ ಕಡೆ ನೋಡಿ) ಆಹಾ! ಈಹೊತ್ತೂ ಬಹು ಗ್ಯಯಲ್ಲೇ ಬರುತ್ತಲಿರುವರು. ಸುಟ್ಟಿತು ಇವರ ಮೋರೆ!

[ಮುಜುಮ್ದಾರನು ಪ್ರವೇಶಿಸುವನು.]

**ಮುಜು:**—(ಪತ್ನಿಯ ಬಳಿಸಾರ್ದು) ಪ್ರಿಯೇ, ಇದೇನು—ಈ ತೆರದ ಮೌನ?

**ಮುಜು. ಪತ್ನಿ:**—(ಕೋಪದಿಂದ) ಗೊತ್ತಾಯಿತು ನಿಮ್ಮ ಹಣೆಬರಹ. ನಿಮ್ಮೊಡನೆ ಮಾತನಾಡಿ ಗಂಟಲೊಣಗಿಸುವ ಬದಲಾಗಿ ದೊಡ್ಡ ಬಂಡೆಕಲ್ಲಿನೊಡನೆ ಮಾತನಾಡುವುದು ಲೇಸು.

**ಮುಜು:**— ಪ್ರಿಯೇ, ಹೀಗೆ ಕೋಪಮಾಡಬಹುದೇ?

**ಮುಜು. ಪತ್ನಿ:**— ಕೋಪವೇನೂ ಇಲ್ಲ. ಮಂದಭಾಗ್ಯಪತಿಯನ್ನು ಪಡೆದುದಕ್ಕಾಗಿ ಪಶ್ಚಾತ್ತಾಪಪಡಬೇಕಾಗಿದೆ. ನಿಮ್ಮನ್ನು ಮದುವೆಯಾದಂದಿ ನಿಂದ ಇದುತನಕವೂ ಅರಗಳಿಗೆಯ ಸುಖವನ್ನಾದರೂ ನಾನು ಕಂಡುದಿಲ್ಲ. ನನ್ನ ತಾಯ್ತಂದೆಗಳು ಏಕೆ ನನ್ನನ್ನು ನಿಮ್ಮ ಜೋಳಿಗೆಗೆ ಹಾಕಿದರೋ! (ಅಳುವನ್ನು ನಟಿಸುವಳು.)

**ಮುಜು:**— (ತವಕಗೊಂಡು) ಪ್ರಿಯೇ, ನಿನಗಾಗಿ ಸೀರೆಯನ್ನು ತರಲು ತುಕಾರಾಮ್ ಶೇಟರಲ್ಲಿ ಹೋಗಿದ್ದೆನು. ಆದರೆ. . . .

**ಮುಜು. ಪತ್ನಿ:**— ಆದರೆ, ಹೋದರೆ— ಇತ್ಯಾದಿ ಅಲ್ಲದಸಲ್ಲದ ನೆವ ಗಳನ್ನು ಹೂಡುವುದು ನಿಮ್ಮ ಹುಟ್ಟುಗುಣ. ನಿಮ್ಮ ಮಿಥ್ಯಾರಾಮಾಯಣ ವನ್ನು ಬಿಚ್ಚುವ ಅವಶ್ಯವಿಲ್ಲ. ನಿಮ್ಮ ಸಹವಾಸವೂ ನನಗೆ ಬೇಕಾಗಿಲ್ಲ. ನಾನು

ನನ್ನ ತವರುಮನೆಯನ್ನು ಸೇರಿ, ಸುಖದಿಂದ ಬಾಳುವೆನು. ನೀವು ನಿಮ್ಮ ಮಕ್ಕಳೊಂದಿಗೆ ನೆಮ್ಮದಿಯಿಂದಿರಬಹುದು.

**ಮುಜು:**—ನೀನು ವ್ಯರ್ಥವಾಗಿ ನನ್ನನ್ನು ಜರೆಯುವೆಯಲ್ಲ! ನನ್ನ ಅಪರಾಧವೇನು? ನನ್ನ ಕರಣೀಕವೇತನದಿಂದ ಜೀವಿತಸಾಗಿಸುವುದೇ ಕಷ್ಟವೆಂದ ಮೇಲೆ ನಿನಗೆ ಸೀರೆಗಳನ್ನೊ ಚಿನ್ನಾಭರಣಗಳನ್ನೊ ಎಲ್ಲಿಂದ ಒದಗಿಸಿ ಕೊಡಲಿ?

**ಮುಜು. ಪತ್ನಿ:**—(ಸ್ವಗತಂ) ಇವರ ಹೇಳಿಕೆಯು ನಿಜ. ಆದರೆ ಬಡತನವನ್ನವಲಂಬಿಸಲು ಬೇರೆ ನನ್ನ ಮನಸ್ಸು ಒಡಂಬಡುವುದಿಲ್ಲವಲ್ಲ! (ಪ್ರಕಾಶಂ) ಕುರುಬನು ಅರಸನಾದನಂತೆ! ಬಡವರ ಹುಡುಗಿಯು ರಾಣಿಯಾದಳಂತೆ!! ಸಾಧಿಸಿದರೆ ಸಬಳ ನುಂಗಬಹುದು!

**ಮುಜು:**—(ಸಂತೋಷಗೊಂಡು) ಪ್ರಿಯೇ, ಚೊಕ್ಕವಾದ ಮಾತು. ಹಾಗೆ ಸಬಳ ನುಂಗುವ ಸಾಧನೆಗೇ ನಾನು ಕೈಯಿಕ್ಕಿದ್ದೇನೆ.

**ಮುಜು. ಪತ್ನಿ:**—(ಆತುರಗೊಂಡು) ಅದಾವ ಸಾಧನೆ?

**ಮುಜು:**—ಇತ್ತ ಬಾ. (ಸುತ್ತಲೂ ನೋಡಿ) ಗೋಡೆಗಳಿಗೂ ಕಿವಿಯುಂಟು. ಕಿವಿಯಲ್ಲಿ ಹೇಳುತ್ತೇನೆ. (ಕಿವಿಯಲ್ಲಿ ಮಾತಾಡುವನು.)

**ಮುಜು. ಪತ್ನಿ:**—(ಸಂತೋಷದಿಂದ ಹಿಗ್ಗಿ) ಶಹಭಾಸ್! ನಿಮ್ಮ ಬುದ್ಧಿ ಕೌಶಲ್ಯವು ಕೊಂಡಾಡತಕ್ಕುದೇ ಸರಿ.

**ಮುಜು:**—ಅವಳೂ ಶಂಕ್ರೂವೂ ಬರುವ ಹೊತ್ತು ಸಮೀಪಿಸಿತು. ನೀನು ಅವಳನ್ನು ಒಳ್ಳೆಯ ರೀತಿಯಲ್ಲಿ ಸನ್ಮಾನಿಸಬೇಕು.

**ಮುಜು. ಪತ್ನಿ:**—ಆಗಬಹುದು. ನಿಮ್ಮ ಸಂಭಾಷಣೆಗೆ ಮಹಡಿಯಲ್ಲಿ ಸಿದ್ಧತೆಗಳನ್ನು ಮಾಡುವೆನು.

**ಮುಜು:**—ಹಾಗೆಯೇ ಆಗಲಿ.

[ಮುಜುಮ್ದಾರನ ಪತ್ನಿಯು ಒಳಪ್ರವೇಶಿಸುವಳು.]

[ಪರದೆ ಬೀಳುವುದು.]

## ದೃಶ್ಯ ೬.

[ರಾಜವೀಥಿಯಲ್ಲಿ ದಾಮಾಜಿಪಂತನು ಪ್ರವೇಶಿಸುವನು.]

**ದಾಮಾಜಿ:**—(ಸ್ವಗತಂ) ವಾರಾಂಗನೆಯಾದ ಕಮಲೆಯು ಹರಿಕಥಾ ಶ್ರವಣಕ್ಕಾಗಿ ತನ್ನ ಮನೆಗೆ ಬರಬೇಕೆಂದು ನನಗೆ ಆಮಂತ್ರಣವಿತ್ತಿರುವಳಷ್ಟೆ!

ವೇಶ್ಯಾಸ್ತ್ರೀಯಾದ ಅವಳ ಮನೆಗೆ ಹೋಗುವುದು ವಿಹಿತವೆ? ಮನಸ್ಸು ನಿರ್ಮಲವಾಗಿ ನಮ್ಮ ಅಧೀನದಲ್ಲಿದ್ದರೆ ಎತ್ತ ಹೋದರೂ ಭಯವೇನು? ಅಲ್ಲದೆ ಹೋಗುವ ಉದ್ದೇಶವಾದರೂ ಸದುದ್ದೇಶವಾಗಿರುವುದು. ಹೀಗಾದುದರಿಂದ ಆವಳ ಬಿನ್ನಹವನ್ನು ಮನ್ನಿಸುವುದೇ ಲೇಸು.

[ಹೋಗುವನು.]

## ದೃಶ್ಯ ೭.

[ವೇಶ್ಯಾಸ್ತ್ರೀ ಕಮಲೆಯ ಮನೆ. ಕಮಲೆಯು ಒಂದು ಪೀಠದಲ್ಲಿ ಕುಳಿತು ಏನೋ ಆಲೋಚಿಸುತ್ತಿರುವಳು.]

**ಕಮಲೆ:**—(ದೀರ್ಘಾಲೋಚನೆಯಿಂದ ನಿಟ್ಟುಸಿರನ್ನು ಬಿಟ್ಟು) ದಾಮಾಜಿಪಂತರಂತಹ ಭಕ್ತಶಿಖಾಮಣಿಗಳು ನನ್ನ ಮೋಹದ ಬಲೆಗೆ ಬೀಳುವರೆ? ನನ್ನ ಪ್ರೇಮಪಾಶದಿಂದ ಅವರನ್ನು ಬಂಧಿಸಲು ಸಾಧ್ಯವಾಗಬಹುದೆ? ಇವು ಕಠಿನ ಸಮಸ್ಯೆಗಳು! ಮುಜುಮ್ದಾರರ ಬೆಡಗಿನ ಮಾತುಗಳಿಗೆ ಸೋತು ದಾಮಾಜಿಪಂತರನ್ನು ವ್ಯಭಿಚಾರಕ್ಕಿಳಿಸಿ ಕೆಡಿಸುವೆನೆಂದು ಅವರಿಗೆ ವಚನಕೊಟ್ಟು ದಾಯಿತು. ನನಗಿಂತಹ ಅಧಿಕಪ್ರಸಂಗವೇಕೆ ಬೇಕಿತ್ತು? (ಆಲೋಚಿಸಿ) ಹೇಗೂ ಇರಲಿ. ಕೊಟ್ಟ ಮಾತಿನ ಪ್ರಕಾರ ನಡೆಯಲೇಬೇಕು. (ತೆರೆಯ ಕಡೆ ನೋಡಿ) ಕುಸುಮೆ! ಕುಸುಮೆ!!

[ಕುಸುಮೆಯು ಪ್ರವೇಶಿಸುವಳು.]

**ಕುಸುಮೆ:**—ಏನೆ ಕಮಲೆ?

**ಕಮಲೆ:**—ಕುಸುಮೆ, ನಾಲ್ಕು ಘಂಟೆಯ ಹೊತ್ತು ಸಮಿಾಪಿಸಿತಲ್ಲವೆ? ದಾಮಾಜಿಪಂತರು ಬರುವ ಹೊತ್ತಾಯಿತು. ಹೊರಗೆ ಹೋಗಿ ಅವರ ಆಗಮನವನ್ನು ನಿರೀಕ್ಷಿಸು! ಅವರು ಬಂದೊಡನೆಯೇ ಅವರನ್ನು ಸನ್ಮಾನಿಸಿ ಒಳಗೆ ಕರೆದುಕೊಂಡು ಬಾ!

**ಕುಸುಮೆ:**—ಹಾಗೆಯೇ ಮಾಡುವೆನು. [ಹೋಗುವಳು.]

[ಕಮಲೆಯು ವೀಣೆಯನ್ನು ತೆಗೆದು ಮಿಾಟುವಳು. ದಾಮಾಜಿಪಂತನನ್ನೊಡಗೊಂಡು ಕುಸುಮೆಯು ಪುನಃ ಪ್ರವೇಶಿಸುವಳು.]

**ಕಮಲೆ:**—(ಎದ್ದು) ಈ ಪೀಠವನ್ನಲಂಕರಿಸಿರಿ.

[ದಾಮಾಜಿಯು ಪೀಠದಲ್ಲಿ ಕುಳಿತುಕೊಳ್ಳುವನು.]

**ದಾಮಾಜಿ:**—(ಆಶ್ಚರ್ಯದಿಂದ ಕಮಲೆಯನ್ನು ಕುರಿತು) ಭಗಿನಿ, ಹರಿಕಥೆ

ಯೆಂದು ಆಮಂತ್ರಣಪತ್ರಿಕೆಯಲ್ಲವೆ? ಹರಿದಾಸರೆಲ್ಲಿ ಮತ್ತು ಶ್ರೋತೃವರ್ಗ ವೆಲ್ಲಿ?

**ಕಮಲೆ:**—(ನಸುನಗೆಯಿಂದ) ಠಾಣೆದಾರರೇ, ತಮ್ಮಂತಹ ಭಕ್ತಶಿಖಾ ಮಣಿಗಳ ಒಲುಮೆಯಿದ್ದಲ್ಲಿ ಈ ದೇವದಾಸಿಯೇ ಹರಿದಾಸಿಯಾಗಿ ಹರಿಕೀರ್ತನೆ ಯನ್ನು ಮಾಡಲು ಶಕ್ತಳಾಗುವುದಿಲ್ಲವೇನು?

**ದಾಮಾಜಿ:**—(ಆಲೋಚಿಸಿ) ಹಾಗಾದರೆ ಆಮಂತ್ರಣಪತ್ರದಲ್ಲಿ ಕರ್ಣಾ ಟಕಪ್ರಾಂತದ ದಾಸರೊಬ್ಬರ ಹರಿಕಥೆಯೆಂದು ಏಕೆ ಬರೆದೆ?

**ಕಮಲೆ:**—(ಸ್ವಗತಂ) ಇದೇನು—ಇವರ ದರ್ಶನಮಾತ್ರದಿಂದ ನನ್ನ ಉಲ್ಲಾಸವು ಕ್ಷೀಣಿಸುತ್ತಿರುವುದು? (ಪ್ರಕಾಶಂ) ಪಂತ ಮಹಾಶಯರೇ, ಹಾಗೆ ಬರೆಯದೆ ನಾನೇ ಕೀರ್ತನೆಯನ್ನು ನಡೆಯಿಸುವುದೆಂದಿದ್ದರೆ ತಾವು ಇಲ್ಲಿಯತನಕ ಚಿತ್ತೈಸುತ್ತಿದ್ದಿರೇ?

**ದಾಮಾಜಿ:**—ತಂಗಿ, ಮೇಲುಕೀಳು ಎಂಬ ಭೇದಭಾವವು ಹರಿಭಕ್ತರಿಗೆ ಸಲ್ಲದು. ಮೇಲ್ಮೆಯು ಗುಣವನ್ನವಲಂಬಿಸಿರುವುದಲ್ಲದೆ ಜಾತಿ, ಪದವಿಗಳನ್ನು ಹೊಂದಿಕೊಂಡಿಲ್ಲ. ಹೀಗಿರಲು ಅಸತ್ಯವನ್ನು ಬರೆದು ನೀನು ನನ್ನನ್ನು ವಂಚಿ ಸಿದುದು ದೊಡ್ಡ ತಪ್ಪು.

**ಕಮಲೆ:**—ನನ್ನಂತಹ ದಾಸಿಯು ಮಾಡಿದ ತಪ್ಪನ್ನು ತಮ್ಮಂತಹ ಹಿರಿ ಯರು ಮನ್ನಿಸಬೇಡವೆ?

**ದಾಮಾಜಿ:**—ಇರಲಿ. ನಿನ್ನ ತಪ್ಪನ್ನು ಕ್ಷಮಿಸಿರುವೆನು. ವೀಣೆಯನ್ನು ಬಾರಿಸಿ, ಪಾಂಡುರಂಗನ ಮಹಿಮೆಯನ್ನು ಕೊಂಡಾಡಿ ಒಂದೆರಡು ಗೀತಗಳನ್ನು ಹಾಡು. ಅವುಗಳ ಶ್ರವಣದಿಂದ ನಾನು ಆನಂದಹೊಂದುವೆನು. ಇನ್ನೊಂದು ದಿವಸ ನಮ್ಮೂರ ದೇವಾಲಯದಲ್ಲಿ ನಿನ್ನ ಹರಿಕಥೆಯ ಏರ್ಪಾಡನ್ನು ಮಾಡೋಣ.

**ಕಮಲೆ:**—ಕುಸುಮೆ, ಫಲಾಹಾರಕ್ಕಣಿಮಾಡಿದೆಯಾ? (ಕೈಸನ್ನೆಯಿಂದ ಕುಸುಮೆಯು ಹೋಗುವಂತೆ ಸೂಚಿಸುವಳು.)

[ಕುಸುಮೆಯು ಹೋಗುವಳು.]

**ದಾಮಾಜಿ:**—ತಂಗಿ, ನಾನು ಯಾವ ಆಹಾರವನ್ನೂ ಸ್ವೀಕರಿಸೆನು. ಇಂದು ಏಕಾದಶಿ.

**ಕಮಲೆ:**—ಹಣ್ಣುಹಂಪಲಗಳನ್ನು ಸೇವಿಸಬಹುದಷ್ಟೆ!

**ದಾಮಾಜಿ:**—ಯಾವುದೂ ಬೇಡ. ವಿಠೋಬನ ಗುಣಗಾನವನ್ನು ಮಾಡು. ಅದನ್ನು ಚೆನ್ನಾಗಿ ಸೇವಿಸುವೆನು.

[ಕಮಲೆಯು ವೀಣೆಯನ್ನು ಮೀಟಿ ಹಾಡುವಳು.]

## ಪದ ೮.

ರಾಗ: ಬಿಹಾಗ್—ತ್ರಿವಟ

(ಸತ್ಯಶಾಂತ ನೃಪನಾಥ ನಾಥಾ) ಎಂಬಂತೆ

ಬಾರೊ ಬೇಗ ಮೊಗ | ದೋರೊ ನಾಥಾ ||
ವಿರಹದಿ ನೊಂದೆನು | ಪೊರೆಯೈ ಪ್ರೀತಾ || ಪಲ್ಲ ||

ರತಿಪತಿಯುಮಮಾ | ಖತಿಗೊಳಿಪನು, ಹಾಯ್ ||
ಅತಿಭೋಗದಿ ಮುದ | ಗೊಳಿಸುವುದೆನ್ನಾ || ೧ ||

**ದಾಮಾಜಿ:**—(ಕಿವಿಮುಚ್ಚಿ) ತಂಗಿ, ಇದು ಪರಮಾತ್ಮನ ಗುಣಗಾನವಲ್ಲ. ಪ್ರಣಯಗೀತವು.

**ಕಮಲೆ:**—ಠಾಣೆದಾರರೇ, ತಾವೇ ಹೀಗೆ ಹೇಳಬಹುದೆ? ಪ್ರಣಯವಿಲ್ಲದೆ ಪ್ರಪಂಚವು ಶೋಭಿಸುವುದೆ? ಶ್ರೀರಾಮನು ಸೀತಾವಿರಹದಿಂದ ತರುಲತೆಗಳನ್ನು ಆಲಿಂಗಿಸಿಲ್ಲವೆ? ಶ್ರೀಕೃಷ್ಣನು ಷೋಡಶಸಹಸ್ರ ಗೋಪಿಕಾಸ್ತ್ರೀಯರ ಮೋಹಜಾಲದಲ್ಲಿ ಸಿಲುಕಲಿಲ್ಲವೆ? ಅಂತಹ ಅವತಾರಪುರುಷರ ವಿಚಾರವೇ ಹಾಗಿರಲು ನಮ್ಮಂತಹರು ಈ ಸಂಸಾರದಲ್ಲಿ ಪ್ರಣಯ, ಭೋಗಗಳನ್ನು ಮೆಚ್ಚುವುದರಲ್ಲಿ ಅತಿಶಯವೇನು? ನಮ್ಮ ಆಯುಷ್ಯವೂ ತೀರಾ ಕಡಮೆ. ಇದ್ದಷ್ಟು ದಿವಸಗಳನ್ನು ಸುಖಭೋಗಗಳಲ್ಲಿ ಕಳೆಯಬೇಕಾದುದು ನಮ್ಮ ಕರ್ತವ್ಯ. ಸಾಧುವೆನ್ನಿಸಿಕೊಂಡು ಧರ್ಮರಾಯನ ಹಾಗೆ ಅರಣ್ಯವಾಸದಲ್ಲಿ ಪ್ರಾಯವನ್ನು ಕಳೆಯುವುದರಲ್ಲಿ ಹುರುಳಿಲ್ಲ.

**ದಾಮಾಜಿ:**—(ಕಿವಿಮುಚ್ಚಿ) ಶಾಂತಂ ಪಾಪಂ—ಶಾಂತಂ ಪಾಪಂ. ಇಂತಹ ಉಪದೇಶವನ್ನೀಯಲು ನನ್ನನ್ನು ಇಲ್ಲಿಗೆ ಬರಮಾಡಿದೆಯಾ? ನಿನಗೆ ಬೇರೆ ಬುದ್ಧಿಭ್ರಮಣವಾಗಿಲ್ಲವಷ್ಟೆ!

**ಕಮಲೆ:**—(ದಾಮಾಜಿಪಂತನ ಬಳಿಸಾರ್ದು)

## ಪದ ೯.

ರಾಗ: ಯಮುನಾಕಲ್ಯಾಣ— ತ್ರಿವಟ

ಕೋಪಿಪರೇ ಎನ್ನೊಳ್ । ಈ ತೆರ ।
ಮೋಹಾಕಾರಾ ॥ ಪ ॥

ದೀನ ದಾಸಿ ನಾ । ನಿಮ್ಮನಳಿಹೆನು ।
ಪರಿಗ್ರಹಿಸುವುದೈ । ಕರುಣದೊಳೀಗ ॥ ೧ ॥

ಮೋಹನಾಂಗಾ, ತಮ್ಮ ಸೌಂದರ್ಯಕ್ಕೆ ಮರುಳಾಗಿ ನಾನು ತಮ್ಮನ್ನು ಮೋಹಿಸುತ್ತಿರುವೆನು! ತಮ್ಮ ಪ್ರೇಮಕ್ಕಾಗಿ ಹಾತೊರೆಯುತ್ತಿರುವೆನು!! ವೇಶ್ಯಾಸ್ತ್ರೀಯಾದ ನನ್ನನ್ನು ಪ್ರೀತಿಸಿ, ರಮಿಸುವುದರಲ್ಲಿ ತಮಗೆ ಆವ ದೋಷವೂ ಬರಲಾರದು. ಅಬಲೆಯಾದ ನನ್ನ ಹೃತ್ತಾಪವನ್ನು ನಿವಾರಿಸುವ ಪುಣ್ಯವನ್ನು ಕಟ್ಟಿಕೊಳ್ಳಬೇಕಾಗಿ ದೈನ್ಯದಿಂದ ಪ್ರಾರ್ಥಿಸುತ್ತೇನೆ.

**ದಾಮಾಜಿ:**—(ಕಿವಿಮುಚ್ಚಿ) ನಮಃ ಪುಂಡಲೀಕವರದ ಪಾಂಡುರಂಗ ಹರಿ ವಿಠ್ಠಲ್! ಮಾತೆ, ನಿನ್ನ ಮಾತುಗಳು ಬಿರುಬಾಣಗಳಂತೆ ನನ್ನ ಹೃದಯವನ್ನು ನೋಯಿಸುತ್ತಿವೆ. ಅಯ್ಯೋ! ಪಾಪಕೃತ್ಯದಿಂದ ಪುಣ್ಯಗಳಿಸಬೇಕೆಂದು ಹೇಳುವ ನಿನ್ನ ಮಾತು ಖೇದಕರವಾಗಿದೆ. ಮಣ್ಣಿನಿಂದ ಬೆಳೆದು ಮಣ್ಣನ್ನು ಸೇರುವ ಎಲುರಕ್ತಮಾಂಸಗಳ ಗೂಡಾದ ಈ ದೇಹವನ್ನು ಮೋಹಿಸುತ್ತಿರುವ ನಿನ್ನ ಪ್ರೇಮವು ಕೃತಕವು. ಅಕಟಾ! ತನ್ನ ಮತ್ತು ಎರಡನೆಯವನ ಸರ್ವನಾಶ ವನ್ನುಂಟುಮಾಡುವ ವ್ಯಭಿಚಾರಕ್ಕೆ ಧಿಕ್ಕಾರವಿರಲಿ!

## ಪದ ೧೦.

ರಾಗ: ಪೀಲುಮಿಶ್ರ— ಗಜಲ್

(ಪರವಶತಾ ಪಾಶ) ಎಂಬಂತೆ

ಕೆಡುಕಿದು ಹಾ! ವೇಶ್ಯೆಯಾಗಿ । ಬಾಳ್ವ ಜನ್ಮ ಲೋಕದಿ ॥ ಪಲ್ಲ ॥
ಬಿಡುತೆ ಹೀನವೃತ್ತಿಯಿದನು ! ಪೂತಳಾಗು ಮಾತೆ ॥ ಅ. ಪ. ॥

ಸ್ವಪರನಾಶಗಳಿಗಿದು ಮೂಲ ।
ಧರ್ಮಪಥದ ಶೂಲ ॥ ೧ ॥

ತಾಯೇ, ಉದರಪೋಷಣಾರ್ಥವಾಗಿ ದೇಹವನ್ನು ವಿಕ್ರಯಿಸುವ ವೇಶ್ಯಾ ಸ್ತ್ರೀಜನ್ಮವು ವ್ಯರ್ಥವು. ಅಕಟಾ! ಸೀತಾ, ಅನಸೂಯಾ, ಮಂಡೋದರಿ

*

ಇತ್ಯಾದ್ಯನೇಕ ಸಾಧ್ವೀಮಣಿಯರನ್ನು ಹೆತ್ತ ತನ್ನ ಉದರದಲ್ಲಿ ಮ್ಲೇಂಛಸ್ವಭಾವದ ವಾರಾಂಗನೆಯರು ಹುಟ್ಟುವರೆಂಬುದಕ್ಕಾಗಿ ಭಾರತಮಾತೆಯು ಕಣ್ಣೀರಿಡುತ್ತಿರುವಳು. ಭಾರತಜನನಿಯನ್ನು ಸಂತೈಸಲು ನಿನಗೆ ಸಾಧ್ಯವಿಲ್ಲವೇ?

**ಕಮಲೆ:**—(ಸ್ವಗತಂ) ಆಶ್ಚರ್ಯ! ಆಶ್ಚರ್ಯ!! ನನ್ನ ನಡತೆಯ ಬಗ್ಗೆ ಇವರು ಕಂಬನಿದುಂಬುತ್ತಿರುವರು. ಪರಮಾತ್ಮಾ! ಇಂತಹ ಮಹಾತ್ಮರ ಮನಸ್ಸನ್ನು ನೋಯಿಸಿ ನಾನಾವ ನರಕವನ್ನು ಸೇರುವೆನೊ! (ಪ್ರಕಾಶಂ—ದಾಮಾಜಿ ಪಂತನ ಕಾಲಿಗೆರಗಿ) ಮಹಾತ್ಮರೆ, ಅಜ್ಞಾನದಿಂದ ಭಕ್ತಶಿರೋಮಣಿಯಾದ ತಮ್ಮ ಮನಸ್ಸನ್ನು ನೋಯಿಸಿದ ನನ್ನ ಅಪರಾಧವನ್ನು ಕ್ಷಮಿಸಬೇಕು. ನನ್ನ ಹೃದಯವು ಪಶ್ಚಾತ್ತಾಪದಿಂದ ಬೇಗುದಿಗೊಳ್ಳುತ್ತಿರುವುದು.

**ದಾಮಾಜಿ:**—(ಸಂತೋಷಗೊಂಡು) ಭಗಿನಿ, ನೀನು ಧನ್ಯಳಾದೆ! ಪಶ್ಚಾತ್ತಾಪವು ಮನುಷ್ಯಕೃತಕರ್ಮದೋಷಗಳನ್ನು ಸುಟ್ಟು ಅವನನ್ನು ಪುನೀತಗೊಳಿಸುವುದು.

**ಕಮಲೆ:**—ಭಕ್ತವರೇಣ್ಯರೆ, ಹಿಂದೆ ಹಲವು ಸರ್ತಿ ವೇಶ್ಯಾವೃತ್ತಿಯಿಂದ ಪಾರಾಗಬೇಕೆಂದು ನಾನು ವೈರಾಗ್ಯವನ್ನು ತಾಳಿದುದುಂಟು. ಆದರೆ ಕಾಯಿಸಿದ ಕಬ್ಬಿಣವು ಒಂದು ಸರ್ತಿ ಕೆಂಪಗಾದರೂ ಕೆಲಹೊತ್ತಿನಲ್ಲೆ ತಣ್ಣಗಾಗಿ ಪೂರ್ವರೂಪವನ್ನು ತಾಳುವಂತೆ ನನ್ನ ವೈರಾಗ್ಯದ ರೀತಿಯಾಯಿತು. ಪೂರ್ವಜನ್ಮಸಂಚಿತವೊ ಅಥವಾ ಮತ್ತೇನೊ ಆ ನಿರ್ಧಾರವನ್ನು ಕಾರ್ಯರೂಪಕ್ಕೆ ತರಲು ನನಗೆ ಇದುವರೆಗೆ ಸಾಧ್ಯವಾಗಲಿಲ್ಲ. ಸಾಧುಶ್ರೇಷ್ಠರಾದ ತಮ್ಮ ಆಶೀರ್ವಾದಪ್ರಭಾವದಿಂದ ನಾನು ಗುಣಾಢ್ಯಳಾಗಬಹುದೆಂಬ ಆಸೆ ನನಗಿದೆ.

**ದಾಮಾಜಿ:**—ತಂಗಿ, ದುರ್ನೀತಿಯ ಹೊಲೆತನದಿಂದ ತನ್ನನ್ನು ಪಾರುಮಾಡಬೇಕೆಂದು ಹರಸುವಂತೆ ಅಪಾರಶಕ್ತಿವಂತನಾದ ಆ ಪಾಂಡುರಂಗನನ್ನು ಬೇಡು. ಆ ದೇವೇಶನು ನಿನ್ನ ಬಯಕೆಯನ್ನು ನಿಶ್ಚಯವಾಗಿಯೂ ಈಡೇರಿಸುವನು. ನೀನು ನಿನ್ನ ಈಗಿನ ಆಡಂಬರದ ಈ ವೇಷಭೂಷಗಳನ್ನು ತೊರೆದು, ಸರಳವಾದ ಜೀವನದಲ್ಲಿ ಬಾಳಬೇಕು. ಜೀವನೋಪಾಯಕ್ಕಾಗಿ ಸ್ವತಂತ್ರವಾದ ಕೈಗಾರಿಕೆಯ ವೃತ್ತಿಯನ್ನವಲಂಬಿಸಬಹುದು. ರಾಟೆಯಲ್ಲಿ ನೂಲು ತೆಗೆದು ಅದನ್ನು ನೇಯ್ಗೆಗಾರರಿಗೆ ಮಾರಾಟಮಾಡಿದರೆ ಸಿಕ್ಕುವ ಉತ್ಪತ್ತಿಯು ನಿನ್ನ ಜೀವನಕ್ಕೆ ಸಾಕಾಗುವುದು.

ಮದುವೆಯಾಗಬೇಕೆಂದಿದ್ದರೆ ನೀನು ಒಬ್ಬನನ್ನೇ ವರಿಸಿ ಅವನೊಂದಿಗೆ ಸಂಸಾರವನ್ನು ನಡೆಯಿಸಬಹುದು; ಹೊರತು ಎಂದಿಗೂ ವ್ಯಭಿಚಾರಕ್ಕೆ ಕೈಯಿಕ್ಕಬೇಡ!

**ಕಮಲೆ**:—ಧನ್ಯಳಾದೆನು! ತಮ್ಮ ಮಾತುಗಳು ನೇರಾಗಿ ನನ್ನ ಹೃದಯವನ್ನು ಹೊಕ್ಕು ನನ್ನ ಅಂತರಂಗವನ್ನು ಆಕಸ್ಮಿಕಪರಿವರ್ತನೆಗೆ ಚಲಿಸುತ್ತಿವೆ! ಅಹಾ! ಭಾಗವತಶಿರೋಮಣಿಗಳ ಪ್ರಭಾವವು ಅತ್ಯದ್ಭುತಕರವಾಗಿದೆ.

**ದಾಮಾಜಿ**:—ಆ ವಿಠೋಬನು ನಿನಗೆ ಕಲ್ಯಾಣವನ್ನುಂಟುಮಾಡಲಿ! ಹೋಗಿ ಬರುವೆನು.

**ಕಮಲೆ**:—ಹಾಗೆಯೇ ಆಗಲಿ.

[ದಾಮಾಜಿಪಂತನು ಹೋಗುವನು.]

[ಅಂಕದ ಫರದೆ ಬೀಳುವುದು.]

— ಇಂತಿದು ಪ್ರಥಮಾಂಕಂ —

## ಎರಡನೆಯ ಅಂಕ

### ದೃಶ್ಯ ೧.

[ಸ್ಥಳ: ಮಂಗಳವೇಢೆಯ ಸಮೀಪದಲ್ಲಿ ನಿರ್ಜನಪ್ರದೇಶ. ಮುಜುಮ್ದಾರನೂ ಶಂಕ್ರ್ಯಾವೂ ಪ್ರವೇಶಿಸುವರು.]

**ಮುಜು:**—ಶಂಕ್ರ್ಯಾ, ಆ ಕಮಲಾಸಾನಿಯು ಠಾಣೆದಾರರನ್ನು ಕೆಡಿಸುವ ಮಾತು ಅಂತಿರಲಿ! ಅವಳನ್ನೇ ಅವರು ವೇಶ್ಯಾವೃತ್ತಿಯಿಂದ ಪರಿವರ್ತಿಸಿದರಲ್ಲ!

**ಶಂಕ್ರ್ಯಾ:**—ಬುದ್ಧಿ, ಅವಳ ಹಿಂದಿನ ಉಡುಗೆತೊಡುಗೆಗಳೇನು—ಒನಪು ಒಯ್ಯಾರಗಳೇನು—ಗಾಡಿಮೋಡಿಗಳೇನು! ಈಗ ಸನ್ಯಾಸಿನಿಯಂತೆ ನಿರ್ಜೀವಳಾಗಿರುವಳು.

**ಮುಜು:**—ದಾವಾಜಿಯವರ ಏಕಲಸ ಮಾಟವು ಅವಳಿಗೂ ಬಡಿಯಿತಲ್ಲ! ಹೋಗಲಿ! ಇನ್ನು ನನ್ನ ಮುಂದೆ ಅವಳ ಹೆಸರನ್ನೆತ್ತಬೇಡ.

**ಶಂಕ್ರ್ಯಾ:**—ಅವಳು ಹೊಳೆಗೆ ಬೀಳಲಿ! ನಮ್ಮ ಉಂಗುರವಂತು ನಮಗೆ ಸಿಕ್ಕಿ . . . (ನಾಲಗೆ ಕಚ್ಚುವನು.)

**ಮುಜು:**—ಏನು—ಉಂಗುರವು ಹಿಂತಿರುಗಿ ಸಿಕ್ಕಿರುವುದೆ?

**ಶಂಕ್ರ್ಯಾ:**—ಇಲ್ಲ, ಧನಿಗಳೇ! ದಕ್ಕಿಸಿಕೊಂಡಳು. ಅದೇ ನನಗೆ ವ್ಯಸನ.

**ಮುಜು:**—ಹೋಗಲಿ! ನಾನು ಠಾಣೆದಾರನಾದೆನೆಂದರೆ ಅಂತಹ ಎಷ್ಟೋ ಉಂಗುರಗಳನ್ನು ಸಂಪಾದಿಸಬಲ್ಲೆ!

**ಶಂಕ್ರ್ಯಾ:**—ನಿಶ್ಚಯ. ನನಗಾದರೂ ನೀವು ಠಾಣೆದಾರರಾಗಬೇಕೆಂದೇ ಆಸೆ.

**ಮುಜು:**—(ಆಲೋಚಿಸಿ) ನಮ್ಮ ಮಂಗಳವೇಢೆಯ ಶರಾಬು ಅಂಗಡಿಯ ಗುತ್ತೆದಾರನ ಪರಿಚಯವು ನಿನಗಿರುವುದೇ?

**ಶಂಕ್ರ್ಯಾ:**—ನನಗೆ ಪರಿಚಯವಿಲ್ಲದ ಗುತ್ತೆದಾರನುಂಟೆ? ಅದರಲ್ಲೂ ಆ ಗುತ್ತೆದಾರನೆಂದರೆ ನನಗೆ ತೀರಾ ಇಷ್ಟದವನು. ಅವನ ಸಹಾಯವಿರುವುದರಿಂದಲೇ ನಾನು ಎಂತೆಂತಹ ಘೋರಕೃತ್ಯಗಳನ್ನೆ ನಡೆಯಿಸುತ್ತಿರುವೆನು.

**ಮುಜು:**—ಅದು ಹೇಗೆ?

**ಶಂಕ್ರ್ಯಾ:**—ಅವನು ಕೊಡುವ ಶರಾಬಿನಿಂದಾಗಿ ನನ್ನ ಎದೆಯಲ್ಲಿ ಧೈರ್ಯವು ಪುಟನೆಗೆಯುತ್ತಿರುವುದು! ಅಂತಹ ಧೈರ್ಯವಿರುವುದರಿಂದಲೇ ಎಂತಹ ಪುಂಡನಾದರೂ ನನಗೆ ತಲೆಬಾಗುವನು.

**ಮುಜು:**—ದಾಮಾಜಿಯವರಮೇಲೆ ದೋಷಾರೋಪಣೆಯನ್ನು ಮಾಡಬೇಕಾದರೆ ಗುತ್ತೆದಾರನ ಸಹಕಾರವು ನಮಗೆ ಬೇಕಾಗಿದೆ.

**ಶಂಕ್ರು:**—(ಆತುರಗೊಂಡು) ಅದು ಹೇಗೆ?

**ಮುಜು:**—ಗುತ್ತೆದಾರನು ಎಲ್ಲರಿಂದ ಹೆಚ್ಚಿನ ತೆರಿಗೆಯನ್ನು ನಮ್ಮ ಬಾದಷಹರ ಸರಕಾರಕ್ಕೆ ಸಲ್ಲಿಸುತ್ತಿರುವನು. ಹೀಗಿದ್ದರೂ ಅವನು ಕಚೇರಿಗೆ ಬಂದಾಗಲೆಲ್ಲ ಆ ದಾಮಾಜಿಯವರು ಅವನಿಗೆ ಕೊಡುವ ಉಪದೇಶ ಗೊತ್ತುಂಟೆ? ಸುರಾಪಾನನಿಷೇಧತತ್ತ್ವವನ್ನು ಜನರಿಗೆ ಬೋಧಿಸಬೇಕಂತೆ! ಜೀವನೋಪಾಯಕ್ಕಾಗಿ ಅವನು ಗುತ್ತೆದಾರವೃತ್ತಿಯನ್ನು ಬಿಟ್ಟು ಬೇರೆ ಉದ್ಯೋಗವನ್ನವಲಂಬಿಸಬೇಕಂತೆ!! ಗುತ್ತೆದಾರನೂ ಬೋಳುಬೊಪ್ಪನು. ಠಾಣೆದಾರರ ಕೂಗಾಟವನ್ನು ಬಾದಷಹರಿಗೆ ತಿಳಿಸುವುದಿಲ್ಲ. ಸಮ್ರಾಟರಿಗೆ ಈ ವಿಚಾರವನ್ನು ಅವನು ಅರಿಕೆಮಾಡಿಕೊಂಡರೆ, ಅವರು ದಾಮಾಜಿಯವರಮೇಲೆ ಕೋಪದ ಬೆಂಕಿಯನ್ನೇ ಕಾರುವರು. ಮಾತ್ರವಲ್ಲ; ಅವರನ್ನು ಠಾಣೆದಾರಹುದ್ದೆಯಿಂದ ಮುಕ್ತಗೊಳಿಸುವರು. ಮತ್ತೆ ಆ ಅಧಿಕಾರವು ನನ್ನ ಪಾಲಿಗೇ ಬರುವುದು.

**ಶಂಕ್ರು:**—ಅದಕ್ಕಾಗಿ ಚಿಂತಿಸಬೇಕೆ? ಗುತ್ತೆದಾರನಿಂದ ದಾಮಾಜಿಯವರು ಅವನಿಗೆ ಕೊಡುವ ಉಪದ್ರವವನ್ನು ಸುಲ್ತಾನರಿಗೆ ತಿಳಿಸುವಂತೆ ಮಾಡುವ ಕೆಲಸ ನನ್ನದು.

**ಮುಜು:**—ಶಂಕ್ರೂ, ಹಾಗೆಲ್ಲ ದುಡುಕಿದರೆ ಪ್ರಯೋಜನವಿಲ್ಲ. ದಾಮಾಜಿಯವರ ಪಕ್ಷಪಾತಿಯಾದ ಬಾದಷಹರು ಗುತ್ತೆದಾರನ ಮಾತನ್ನು ಸುಲಭದಲ್ಲಿ ನಂಬರು.

**ಶಂಕ್ರು:**—ನಂಬುವಂತೆ ನಿಮ್ಮ ಸಾಕ್ಷ್ಯವನ್ನು ಕೊಟ್ಟರಾಯಿತು.

**ಮುಜು:**—ತೆರೆಯ ಮರೆಯಲ್ಲಿದ್ದು ನಾವು ಕೆಲಸಮಾಡಬೇಕೆಂಬುದನ್ನು ಮರೆತೆಯಾ? (ಕಿಸೆಯಿಂದ ಒಂದು ಓಲೆಯನ್ನು ತೆಗೆದು) ಇದೋ, ನಾನು ಪತ್ರದ ಪ್ರತಿಯೊಂದನ್ನು ತಯಾರಿಸಿರುವೆನು. ಈ ರೀತಿಯಲ್ಲಿ ಗುತ್ತೆದಾರನು ಠಾಣೆದಾರರಿಗೆ ಒಂದು ಪತ್ರವನ್ನು ಬರೆಯಬೇಕು. ದಾಮಾಜಿಯವರು ಅದಕ್ಕೆ ಉತ್ತರವನ್ನು ಕೊಟ್ಟೇ ಕೊಡುವರು. ಆ ಪ್ರತ್ಯುತ್ತರವೇ ನಮ್ಮ ಕಾರ್ಯಸಾಧನೆಗೆ ಸಾಧಕವಾಗುವುದು.

**ಶಂಕ್ರು:**—ನಿಮ್ಮ ಹಂಚಿಕೆ ಈಗ ತಿಳಿಯಿತು. ಗುತ್ತೆದಾರನು ಬರೆಯಬೇಕಾದುದೇನು?

**ಮುಜು:**—ಠಾಣೆದಾರರ ಅಭಿಪ್ರಾಯದಂತೆ ಮದ್ಯಪಾನನಿಷೇಧತತ್ತ್ವವನ್ನು ತಾನು ಜನರಿಗೆ ಬೋಧಿಸುವೆನೆಂದೂ ಗುತ್ತೆಯನ್ನು ಧಿಕ್ಕರಿಸಿ ಬಿಟ್ಟು

ಜೀವನೋಪಾಯಕ್ಕಾಗಿ ಬೇರೆ ಉದ್ಯೋಗವನ್ನು ವಹಿಸುವೆನೆಂದೂ ಬರೆಯ ಬೇಕು.

**ಶಂಕ್ರು:**—ದಾವಮಾಜಿಯವರು ಆ ಅಭಿಪ್ರಾಯವನ್ನು ಸಮರ್ಥಿಸಿ ಉತ್ತರ ಬರೆಯುವರು.

**ಮುಜು:**—ಆ ಸಮರ್ಥನೆಯ ಪತ್ರವನ್ನು ಗುತ್ತೆದಾರನ ಮುಖಾಂತರವೆ ರಾಜದರ್ಬಾರಿಗೆ ಹಾಜರುಪಡಿಸಿದಲ್ಲಿ ನಾವು ಕೃತಕೃತ್ಯರಾದಂತೆಯೇ ಸರಿ.

**ಶಂಕ್ರು:**—ಆ ಪ್ರತಿಯನ್ನು ಇತ್ತ ಕೊಡಿರಿ. ಈಗಲೇ ಗುತ್ತೆದಾರನನ್ನು ಕಂಡು, ಅವನಿಂದ ಓಲೆಯನ್ನು ಬರೆಯಿಸಿ, ಠಾಣೆದಾರರಿಗೆ ಕಳುಹಿಸುವಂತೆ ಏರ್ಪಡಿಸುವೆನು.

**ಮುಜು:**—(ಪತ್ರವನ್ನು ಕೊಟ್ಟು) ಶಂಕ್ರೂ, ನಿಜವಾದ ಸೇವಕನೆಂದರೆ ನೀನೇ. ಬರುವ ಉತ್ತರವನ್ನು ಜಾಗರೂಕತೆಯಿಂದ ತೆಗೆದಿಡಲು ಗುತ್ತೆದಾರನಿಗೆ ತಿಳಿಸು. ಮುಂದಿನ ವಿಚಾರ ಮತ್ತೆ.

**ಶಂಕ್ರು:**—ಎಲ್ಲ ವಿವರವನ್ನು ಸ್ಪಷ್ಟವಾಗಿ ಹೇಳುತ್ತೇನೆ. (ತಲೆಯನ್ನು ತುರಿಸಿ) ಬುದ್ಧಿ, ಜೇಬಿನಲ್ಲಿ ಒಂದು ರೂಪಾಯಿ ಇರುವುದೆ?

**ಮುಜು:**—(ರೂಪಾಯಿ ಕೊಟ್ಟು) ತೆಗೆದುಕೊ. ಕರ್ತವ್ಯದಲ್ಲಿ ಉದಾಸೀನನಾಗಬೇಡ. ಜಾಗ್ರತೆ!

**ಶಂಕ್ರು:**—ನಿಮ್ಮ ಕೆಲಸದಲ್ಲಿ ಔದಾಸೀನ್ಯವೇ? ಈಗಲೇ ಹೊರಟೆ. [ಹೋಗುವನು.]

**ಮುಜು:**—(ಸ್ವಗತಂ) ಠಾಣೆದಾರನಾಗಲು ಸಾಧ್ಯವಿದೆಯೊ ಇಲ್ಲವೊ ನೋಡುತ್ತೇನೆ! [ಮಿಸೆತಿರುವಿ ಹೋಗುವನು.]

[ಪರದೆ ಬೀಳುವುದು.]

## ದೃಶ್ಯ ೨.

[ಶರಾಬು ಅಂಗಡಿ. ಗುತ್ತೆದಾರನು ಮಂಡಿಸಿರುವನು. ಸೇವಕನೊರ್ವನು ಮದ್ಯಹಂಚುತ್ತಿರುವನು. ಇರ್ವರು ಮದ್ಯಪಾಯಿಗಳು ಸುರೆಯನ್ನು ಸೇವಿಸಿ, ನೆಲದ ಮೇಲೆ ಬೀಳುವರು. ಮೂರನೆಯವನು ಮತ್ತೆ ಸುರಾಪಾನಮಾಡಿ ನೆಲದಮೇಲೆ ಬೀಳುವನು.]

## ಪದ ೧೧.

೧ನೆಯವ:—

ರಾಗ: ಗಾರಾ— ದಾದರಾ

ಮಧುರ ಮಧುರ । ಮಧುವು ನರರ ।
ಸುಧೆಯು ಸತ್ಯ ॥
ಚದುರನದರ । ಸುಖದೆ ಭರದೆ ।
ಮೆರೆವ ನಿತ್ಯ । ಆಹಾ ॥ ೧ ॥

ಹೃದ್ಯ ಮದ್ಯ । ಕುಡಿಯದವಗೆ ।
ಬುದ್ಧಿಯಿಲ್ಲಾ ॥
ಶುದ್ಧ ಮನದೆ । ಕುಡಿಯುವವಗೆ ।
ಮರಣವಿಲ್ಲಾ । ಆಹಾ ॥ ೨ ॥

"ತಿಂದವ್ನೇ ಬೆಲ್ಲದಾ ರುಚೀ ಬಲ್ಲ" ಎಂಬಾ ಮಾತಿನಂತೆ ಮದ್ಯ ಸೇವಿಸು. ವವ್ನೆ ಅದ್ರ ರುಚಿ ಬಲ್ರು. ಕೆಲವು ಮುಟ್ಟಾಳ್ರು ಒಂದೇ ಗುಟ್ಕು ಮದ್ಯಾ. ಸೇವಿಸದೆ "ಸುರೆ ಅನಿಷ್ಟಕರ. ಅದನ್ನಾ ನಿಸೇದಿಸಬೇಕು" ಎಂದು ಹೇಳೋರಲ್ಲ! ಅವ್ರಿಗೇನು ಹೇಳ್ಬೇಕು?—ಪಸುಗಳು. ಕೇವಲ ಪಸುಗಳು. ಅಲ್ದಿದ್ರೆ ಲೋಕಕ್ಕೆ ಸಾಂತೀನ ಕೊಡ್ಲು ಅವತರ್ಸಿದ ಸುರೇನ ಅವ್ರು ತಿರಸ್ಕರ್ಸುತಿದ್ರೆ?

**೨ನೆಯವ:**— ನೀನು ಸತ್ಯಾ ಹೇಳ್ತದೆ— ಸತ್ಯಾನೇ ಹೇಳ್ತದೆ.

**೩ನೆಯವ:**— ಹೌದು. ಸುರಾಸೇವ್ನೆಯಿಂದಾ ಆಗೋ ಆನಂದಾ ಸಗಾ೯ದಲ್ಲಿ ಸಿಗ್ದು. ಈಗ ಕುಡಿಯೋಕೆ ಮದ್ಯಾ ಸಿಕ್ಕಿದ್ರೆ ಸತ್ತನಂತ್ರ ಸಂಗೆ ಸಗಾ೯ ಬೇಡಾ.

[ಶಂಕ್ರ್ರವು ಪ್ರವೇಶಿಸುವನು.]

**ಶಂಕ್ರ್ರ:**—(ಗುತ್ತೆದಾರನನ್ನು ಕುರಿತು) ಗೆಳೆಯನೇ, ನಿನ್ನೊಡನೆ ಅಗತ್ಯ ವಾಗಿ ಮಾತನಾಡುವ ಒಂದು ವಿಚಾರವುಂಟು.

**ಗುತ್ತೆದಾರ:**—(ಆಲೋಚಿಸಿ) ಏನು— ಇಂದು ಸುರಾಪಾನಕ್ಕೆ ದುಡ್ಡು ತಂದಿಲ್ಲವೆಂದೇ?

**ಶಂಕ್ರ್ರ:**—ಸುರಾಪಾನದ ಮಾತು ಹಾಗಿರಲಿ! ಒಂದು ರಹಸ್ಯವಾದ ವಿಷ ಯವು ಹೇಳಲಿಕ್ಕಿದೆ. ಇತ್ತ ಬಾ!

[ಗುತ್ತೆದಾರನು ಶಂಕ್ರ್ರವಿನ ಸಮೀಪಕ್ಕೆ ಬರುವನು.]

**ಶಂಕ್ರ್ರ:**—ನೀನು ಕಚೇರಿಗೆ ಹೋದಾಗಲೆಲ್ಲ ಆ ಠಾಣೆದಾರರು ನಿನ್ನ

ಗುತ್ತೆದಾರವೃತ್ತಿಯನ್ನು ಬಿಡಬೇಕೆಂದು ಹೇಳುವರಲ್ಲ! ಯಾಕೆ? ನೀನಾದರೊ "ನೋಡುತ್ತೇನೆ" ಎಂದು ಹೇಳಿ ತಲೆಬಾಗಿ ಬರುವೆ! ಹೊಟ್ಟೆಹೊರೆಯಲು ಯಾವ ವೃತಿಯನ್ನೂ ಕೈಕೊಳ್ಳಬಹುದು. ಹೀಗಿರಲು ನಿನ್ನ ಈ ವೃತ್ತಿಯಿಂದ ಆ ಹಾಳು ದಾಮಾಜಿಯವರಿಗೆ ಬಂದ ನಷ್ಟವೇನು? ನಮ್ಮ ಗುತ್ತೆ ಅಂಗಡಿಗಳ ದೆಸೆಯಿಂದ ಸರಕಾರವು ಹೊಂದುವ ಲಾಭವು ಅಷ್ಟಿಷ್ಟೆ! ಲೆಕ್ಕ ಮಿತಿಯಿಲ್ಲ. ಹೀಗಿದ್ದೂ ಸುರಾಪಾನನಿಷೇಧವಂತೆ!—ಆ ಠಾಣೆದಾರರಿಗೆ ಕಣ್ಣು ನಮ್ಮ ಮೇಲೆ. ಏನು ಹೇಳುವೆ?

**ಗುತ್ತೆದಾರ:**—(ಸ್ವಗತಂ) ಕಚೇರಿಯಲ್ಲಿ ನಡೆಯುವ ವೃತ್ತಾಂತವು ಈ ಹೆಂಡಕುಡುಕನಿಗೆ ಹೇಗೆ ಗೊತ್ತಾಯಿತು? (ಪ್ರಕಾಶಂ) ಹೋಗಲಿ—ಬಿಡು ಆ ವಿಷಯವನ್ನು! ಆ ಪುಣ್ಯಾತ್ಮ ದಾಮಾಜಿಪಂತರು ಇದ್ದುದನ್ನು ಇದ್ದ ಹಾಗೆ ಹೇಳುವವರು. ನಮ್ಮ ವಿಪರೀತಬುದ್ಧಿಗೆ ಅವರು ಹೊಣೆಯಲ್ಲ.

**ಶಂಕ್ರು:**—ನೀನೂ ಹೀಗೆ ಮಾತನಾಡಬಹುದೇ? ತಾಳಬಡಿದು "ವಿಠ್ಠಲ್, ಪಾಂಡುರಂಗ" ಎಂದು ಕುಣಿಯುವ ಮಾತ್ರಕ್ಕೆ ಅವರು ಪುಣ್ಯಾತ್ಮರು—ಹಾಗೆ ಮಾಡದುದರಿಂದ ನಾವು ಪಾಪಿಷ್ಠರಾಗುವೆವೇ? ಅವರ ಉದ್ಧಟತನಕ್ಕಾಗಿ ಅವರಿಗೆ ಬುದ್ಧಿಕಲಿಸಲು ಒಂದು ಉಪಾಯವನ್ನು ಕಲ್ಪಿಸಿರುವೆನು.

**ಗುತ್ತೆದಾರ:**—(ಆತುರ ನಟಿಸಿ) ಅದೇನು ಉಪಾಯ?

**ಶಂಕ್ರು:**—(ಓಲೆಯನ್ನು ಗುತ್ತೆದಾರನ ಕೈಗೆ ಕೊಟ್ಟು) ಇದೊಂದು ಹಸ್ತಪ್ರತಿ. ನೀನು ಈ ರೀತಿಯಲ್ಲಿ ದಾಮಾಜಿಯವರಿಗೆ ಒಂದು ಪತ್ರವನ್ನು ಬರೆಯಬೇಕು. ಅದಕ್ಕೆ ಅವರು ಕೊಡುವ ಉತ್ತರವನ್ನು ತೆಗೆದಿಡಬೇಕು. ಮುಂದಿನ ಕೆಲಸವೆಲ್ಲ ನನ್ನದು.

**ಗುತ್ತೆದಾರ:**—(ಆ ಪ್ರತಿಯನ್ನು ಓದಿನೋಡಿ) ಮುಂದಿನ ಕೆಲಸವಾವುದು?

**ಶಂಕ್ರು:**—ದಾಮಾಜಿಯವರು ಒಳಸಂಚಿನಲ್ಲಿ ಸರಕಾರಕ್ಕೆ ಮಾಡುತ್ತಿರುವ ಘಾತುಕತನವನ್ನು ಸುಲ್ತಾನ್ ಪಾಚ್ಛಾಯರೊಡನೆ ವಿಶದವಾಗಿ ವಿವರಿಸಬೇಕು. ರುಜುವಾತಿಗೆ ಅವರ ಪತ್ರವೇ ಆಧಾರ. ಆಗ ಸಮ್ರಾಟರು ಕೋಪಿಸಿ, ಅವರನ್ನು ಆ ಹುದ್ದೆಯಿಂದ ತೆಗೆದುಬಿಸುಟು, ಬೇರೆಯವರನ್ನು ನೇಮಿಸುವರು. ಮತ್ತೆ ದಯಾಳುವಾದ ಮುಜುಮ್ದಾರರೇ ಠಾಣೆದಾರರಾಗುವಂತೆ ನಾವು ಪ್ರಯತ್ನಿಸಿದರಾಯಿತು.

**ಗುತ್ತೆದಾರ:**—ದೊಡ್ಡ ಆಲೋಚನೆ. ಇದನ್ನು ನಿನಗೆ ಕಲಿಸಿಕೊಟ್ಟವರಾರು?

**ಶಂಕ್ರ್ರಾ:**— ಬೇರೆಯವರು ನನಗೆ ಕಲಿಸಿಕೊಡಬೇಕೇ? ತಂತ್ರದಲ್ಲಿ ನಾನೇನು ಕಡಮೆಯೇ?

**ಗುತ್ತೆದಾರ:**— (ಕೋಪಗೊಂಡು) ಮೂರ್ಖನೆ, ಆ ಮಹಾಕಪಟಿ ಮುಜುಮ್ದಾರರು ಸುರಾಪಾನವನ್ನು ಮಾಡಲು ನಿನಗೆ ದುಡ್ಡುಕೊಟ್ಟಿರಬೇಕು. ಇಲ್ಲದಿದ್ದರೆ ನೀನು ಅವರ ಪಕ್ಷವನ್ನು ಹಿಡಿದು ಮಾತನಾಡುತ್ತಿದ್ದಿಲ್ಲ! ನಾನು ಮದ್ಯವಿಕ್ರಯಿಸುವ ಗುತ್ತೆದಾರನು ಅಹುದು. ಆದರೆ ನಿನ್ನಂತೆ ಸುರಾಪಾಯಿಯಲ್ಲ. ಸತ್ಯ— ಅಸತ್ಯಗಳನ್ನು ತಿಳಿದುಕೊಳ್ಳುವ ವಿಚಾರ ನನ್ನಲ್ಲುಂಟು. ದಾಮಾಜಿಪಂತರ ಬೋಧನೆಯು ನ್ಯಾಯವಾದುದು. ಬರುವ ಸರ್ತಿ ಹರಾಜಿನಲ್ಲಿ ಗುತ್ತೆಯನ್ನು ವಹಿಸಿಕೊಳ್ಳಬಾರದೆಂದು ನಾನು ದೃಢವಾಗಿ ಸಂಕಲ್ಪಿಸಿರುವೆನು.

**ಶಂಕ್ರ್ರಾ:**— ಬರುವ ಸರ್ತಿಯ ಮಾತು ಅಂತಿರಲಿ! ದಾಮಾಜಿಯವರ ಈಗಿನ ಅಧಿಕಪ್ರಸಂಗಕ್ಕೆ ನಾವು ಅವರಿಗೆ ಬುದ್ಧಿ ಕಲಿಸಲೇಬೇಕು.

**ಗುತ್ತೆದಾರ:**— ನಿನ್ನ ಅಧಿಕಪ್ರಸಂಗವು ಹೆಚ್ಚಾಗುತ್ತಿದೆ. ಒಳ್ಳೆಯ ಮಾತಿನಿಂದ ನೀನು ಇಲ್ಲಿಂದ ಹೊರಟುಹೋಗು! ಬಾಯಿಗೆ ಬಂದಂತೆ ಹರಟಬೇಡ!!

**ಶಂಕ್ರ್ರಾ:**— (ಸ್ವಗತಂ) ಅಕಟಾ! ಮುಜುಮ್ದಾರರ ಕಾರ್ಯಕ್ಕೆ ವಿಘ್ನಗಳೇ ಹೆಚ್ಚು. (ಪ್ರಕಾಶಂ) ಮಿತ್ರನೇ, (ನಕ್ಕು) ನೀನು ನನ್ನಮೇಲೆ ಹೀಗೆ ಕೋಪಿಸಬಹುದೇ?

**ಗುತ್ತೆದಾರ:**— ನಿನ್ನಂತಹ ಸುರಾಪಾಯಿಗಳ ಗೆಳೆತನವು ನನಗೆ ಬೇಕಾಗಿಲ್ಲ. ಖಂಡಿತವಾಗಿ ಹೇಳುತ್ತೇನೆ— ನಿನ್ನ ಕುತಂತ್ರಗಳಿಗೆ ನಾನೆಂದೂ ಸಹಾಯಕನಾಗಲಾರೆ.

**ಶಂಕ್ರ್ರಾ:**— ಗೆಳೆಯನೇ, ನಾನು ಹೇಳಿದ ಕೆಲಸವನ್ನು ಮಾಡಿದರೆ ನೀನು ದೊಡ್ಡ ಬಹುಮಾನವನ್ನು ಹೊಂದುವೆಯಂತೆ!

**ಗುತ್ತೆದಾರ:**— ಈ ಅಪಮಾನವೇ ಸಾಕು— ನಿನ್ನ ಬಹುಮಾನ ಬೇರೆ ಬೇಡ! ಜಾಗ್ರತೆಯಾಗಿ ಇಲ್ಲಿಂದು ಹೊರಡು!

**ಶಂಕ್ರ್ರಾ**— (ಕೋಪಗೊಂಡು) ನಿನ್ನ ಸಹವಾಸವೇ ಬೇಡ! (ಕಿಸೆಯಿಂದ ರೂಪಾಯಿ ತೆಗೆದು) ಇದೋ, ಒಂದು ರೂಪಾಯಿಯ ಶರಾಬನ್ನು ಕೊಡು.

**ಗುತ್ತೆದಾರ:**— ನಮ್ಮ ಸೇವಕನಿಂದ ಪಡೆದುಕೊ! ಹೋಗು!!

**ಶಂಕ್ರ್ರಾ:**— (ರೂಪಾಯಿಯ ಶರಾಬನ್ನು ಪಡೆದು ಕುಡಿದನಂತರ ನೆಲದ ಮೇಲೆ ಬಿದ್ದು ತಡವರಿಸಿ) ಗುತ್ತೆದಾರ್, ದಾಮಾಜಿಯವ್ರ ಹೊಗ್ಳು ಭಟನಾಗಿ

ಕುಣಿ—ಕುಣಿ! ನನ್ನ ಧನಿ ಮುಜುಮ್ದಾರ್‌ರನ್ನ ಠಾಣೆ . . ದಾರ . . ರನ್ನಾಗಿ . . . ಮಾಡ್ತೀ . . ನಿ.

[ನಿಧಾನವಾಗಿ ಫರದೆ ಬೀಳುವುದು.]

## ದೃಶ್ಯ ೩.

[ನಿರ್ಜನಪ್ರದೇಶ. ಮುಜುಮ್ದಾರನೂ ಶಂಕ್ರ್ರವೂ ಪ್ರವೇಶಿಸುವರು]

**ಮುಜು:**—ಶಂಕ್ರ್ರಾ, ಆಡುವಾಗ ಯಾವ ಕಾರ್ಯವೂ ನಿನಗೆ ಸುಲಭ. ಆದರೆ ಮಾಡುವಾಗ ಎಲ್ಲವೂ ಅಸಾಧ್ಯ.

**ಶಂಕ್ರ್ರ:**—ಒಡೆಯರೇ, ನೀವೇ ಹೀಗೆ ಹೇಳಬಹುದೆ? ಆ ಹಾಳು ಗುತ್ತೆದಾರನು ಪತ್ರಬರೆಯದ ಮಾತ್ರಕ್ಕೆ . . .

**ಮುಜು:**—(ಬೇಸರದಿಂದ) ಗುತ್ತೆದಾರನೂ ಹಾಗೆಯೆ! ವೇಶ್ಯೆಯೂ ಹಾಗೆಯೆ!! ನೀನು ಒಳಗಿಂದೊಳಗೆ ಆ ದಾಮಾಜಿಯವರ ಪಕ್ಷಪಾತಿಯಾಗಿರಬಹುದೆಂಬ ಅನುಮಾನವು ನನಗಿರುವುದು.

**ಶಂಕ್ರ್ರ:**—ಧನಿಗಳೇ, ನೀವೂ ಹೀಗೆ ಶಂಕಿಸಬಹುದೇ? ನಿಮಗೆ ನನ್ನಮೇಲೆ ಅನುಮಾನವೇ? ಕಷ್ಟ ಕಷ್ಟ. ಏಳೇಳು ಜನ್ಮಗಳಲ್ಲಿಯೂ ನಿಮ್ಮ ದಾಸನಾಗಿರಬೇಕೆಂಬುದೇ ನನ್ನ ಬಯಕೆ. ನಿಮ್ಮ ವಿಷಯದಲ್ಲಿ ನನಗಷ್ಟು ವಿಶ್ವಾಸ!—ನಿಮ್ಮ ಕೊರಳಾಣೆ.

**ಮುಜು:**—ಶಂಕ್ರ್ರಾ, ಆ ಹಾಳು ಠಾಣೆದಾರರ ಮೇಲೆ ನಾವು ದೋಷಾರೋಪಣೆಮಾಡಲು ಹೂಡಿದ ತಂತ್ರಗಳು ನಿಷ್ಫಲವಾದುವು. ಅಯ್ಯೋ, ಎಂತಾದರೂ ಠಾಣೆದಾರನಾಗಿ ಮೆರೆಯಬೇಕೆಂಬ ಒಂದು ಕಾಂಕ್ಷೆಯು ಹಗಲಿರುಳು ನನ್ನ ಹೃದಯವನ್ನು ಕೊರೆಯುತ್ತಿರುವುದು. ಏನು ಮಾಡಲಿ?

**ಶಂಕ್ರ್ರ:**—ಬುದ್ಧಿ, ನೀವು ಹೀಗೆ ಉದ್ವಿಗ್ನರಾಗಬಹುದೇ? ಭೂಲೋಕಕ್ಕೆ ಗಂಗೆಯನ್ನು ತರಲು ಭಗೀರಥನು ಪಟ್ಟ ಸಾಹಸವೆಷ್ಟು? ಕಾರ್ಯಸಾಧನೆಯಲ್ಲಿ ಮೊದಮೊದಲು ಎಡವಿಬೀಳುವುದು ಲೋಕಪದ್ಧತಿ. ಆದರೆ ಹಿಡಿದ ಕಾರ್ಯವು ಕೈಗೂಡುವತನಕ ಸಾಧನೆಮಾಡಬೇಕಾದುದು ಮನುಷ್ಯಧರ್ಮವಲ್ಲವೇ?

**ಮುಜು:**—(ಹಿಗ್ಗಿ) ಭಲಾ, ಭೇಷ್!—ಸೊಗಸಾದ ಮಾತು. ನೀನು ಇಷ್ಟು ಚತುರನೆಂದು ನಾನು ತಿಳಿದಿರಲಿಲ್ಲ. ದಾಮಾಜಿಯವರ ಅವನತಿಯ ಕುರಿತು ಮತ್ತೇನು ಉಪಾಯವಿದೆ?—ಚಿಂತಿಸಿ ಹೇಳು!

**ಶಂಕರ:** — ಆಲೋಚಿಸುವೆನು. (ಆಲೋಚಿಸಿ) ನಿರ್ಜನಪ್ರದೇಶವಿದು. ಇಲ್ಲಿ ಸ್ವಲ್ಪ ವಿಶ್ರಮಿಸೋಣವೆ?

**ಮುಜು:** — ಹಾಗೆಯೇ ಮಾಡೋಣ.

[ಇಬ್ಬರೂ ಒಂದು ಶಿಲೆಯಮೇಲೆ ಕುಳಿತುಕೊಳ್ಳುವರು. ಅಷ್ಟರಲ್ಲಿ ಕೈಯಲ್ಲಿ ಕೋಲನ್ನು ಹಿಡಿದುಕೊಂಡ ಒಬ್ಬ ಬ್ರಾಹ್ಮಣನು ಪ್ರವೇಶಿಸುವನು.]

ಪದ ೧೨.

ರಾಗ: ಕೇದಾರ — ಏಕ್ತಾ

(ದುಗುಡವಿದನು ಕಾಣೆ) ಎಂಬಂತೆ

ನತಜನಗಣಪೋಷಾ, । ರಮೇಶಾ, ।
ಈಶಾ, ಖಳದೈತ್ಯಕುಲವಿ । ನಾಶಾ, ಪರೇಶಾ ॥ ಪ ॥

ತಾಳಲಾರೆನಕಟಕಟಾ । ಬಾಳ ಹಸಿವನಿದನು ।
ಗೋಳ ಕೇಳಿ ಸುಮ್ಮನಿಹರೆ । ಪಾಲಿಸೈ ಸುರೇಶಾ ॥ ೧ ॥

ಹಾಯ್, ಹಾಯ್! ಬಲವತ್ತರವಾಗಿ ಪೀಡಿಸುತ್ತಲಿರುವ ಈ ಕ್ಷುದ್ಬಾಧೆಯನ್ನು ಸಹಿಸೆನು! ಸಹಿಸೆನು!! ಎರಡು ದಿನಗಳ ಉಪವಾಸದಿಂದ ಕೈಕಾಲುಗಳಂತೂ ಬಚ್ಚಿಹೋಗಿರುವುವು.

[ಮುಜುಮ್ದಾರನು ಎದ್ದು ಮುಂದೆ ಬರುವನು.]

**ಮುಜು:** — ವಿಪ್ರೋತ್ತಮರೆ, ನಿಮ್ಮ ಪಂಢರಪುರಪ್ರಾಂತದಲ್ಲಿ ಘೋರ ಕ್ಷಾಮವಂತೆ! ಎಂದಮೇಲೆ ಆಹಾರಪದಾರ್ಥಗಳನ್ನು ಎಲ್ಲಿಂದ ಒದಗಿಸಿಕೊಳ್ಳುವಿರಿ?

**ಬ್ರಾಹ್ಮಣ:** — ಪೂಜ್ಯರೆ, ನಮ್ಮ ಅವಸ್ಥೆಯನ್ನು ಏನೆಂದು ಹೇಳಲಿ? "ರಾಜಾ ಪ್ರತ್ಯಕ್ಷದೇವತಾ" ಎಂಬುದು ಲೋಕೋಕ್ತಿ. ಆದರೆ ಆ ಮಾತು ನಮ್ಮ ಸುಲ್ತಾನ್ ಬಾದಷಹರಿಗೆ ಸಲ್ಲದು. ಇಲ್ಲದಿದ್ದರೆ ಪ್ರಜೆಗಳು ಬರಗಾಲದಿಂದ ಮರಣೋನ್ಮುಖರಾಗಿರಲು ಅವರು ಯಾವ ಗೊಡವೆಯೂ ಇಲ್ಲದೆ ಸುಖಲೋಲುಪರಾಗಿರುತ್ತಿದ್ದರೆ? "ತಾಯಿಗೆ ಮಗನು ಬೇಡವಾದರೆ ಅಜ್ಜಿಗೆ ಮೊಮ್ಮಗನು ಯಾಕೆ?" ಎಂಬ ನಾಣ್ಣುಡಿಯಂತೆ ಅರಸನು ನಮ್ಮನ್ನು ನಿರ್ಲಕ್ಷಿಸಿರಲು, ನಮ್ಮ ಯೋಗಕ್ಷೇಮವನ್ನು ಕೇಳುವವರಾರು? ಆಹಾರವನ್ನು ಒದಗಿಸಿಕೊಳ್ಳುವುದೆಲ್ಲಿಂದ? ಇಂದಿಗೆ ಎರಡು ದಿವಸಗಳಿಂದ ಉಪವಾಸವೇ ನಮ್ಮ ಗತಿಯಾಗಿದೆ.

**ಮುಜು:**—ಆಹಾ! ಕಷ್ಟ, ಕಷ್ಟ!! ನಿಮ್ಮ ವೃತ್ತಾಂತವು ಖೇದಕರವಾಗಿರುವುದು. ನೀವು ಮಾತ್ರವೊ ಅಥವಾ ಎಲ್ಲರೂ ಉಪವಾಸದಲ್ಲಿರುವರೊ?

**ಬ್ರಾಹ್ಮಣ:**—ನನ್ನ ಹೆಂಡತಿ, ಮಕ್ಕಳು ಕೂಡ ಉಪವಾಸದಲ್ಲಿರುವರು.

[ಶಂಕ್ರ್ಯಾವು ಎದ್ದು ಮುಂದೆ ಬರುವನು.]

**ಮುಜು:**—ನಿಮ್ಮ ಊರಿನ ಎಲ್ಲರೂ ಬರಗಾಲಕ್ಕೀಡಾಗಿರುವರೇ?

**ಬ್ರಾಹ್ಮಣ:**—ಪುಣ್ಯಾತ್ಮರೆ, ನೀವು ಹೀಗೆ ಕೇಳಬಹುದೇ? ಆಹಾರಪದಾರ್ಥಗಳಿಗೇ ತತ್ವಾರಬರಲು ಯಾರು ಹೇಗೆ ಕ್ಷಾಮದಿಂದ ತಪ್ಪಿಸಿಕೊಳ್ಳುವುದು? ನನಗೆ ಗೊತ್ತಿರುವ ಹಾಗೆ ಪಂಢರಪುರದಲ್ಲಿ ಮತ್ತು ಅದರ ಸರಹದ್ದುಗಳಲ್ಲಿ ಸುಮಾರು ಐದುಸಾವಿರ ಜನರು ಕ್ಷಾಮಕ್ಕೆ ಆಹುತಿಯಾಗಿರುವರು.

**ಮುಜು:**—(ಆಲೋಚಿಸಿ) ಬೇರೆಯವರ ಮಾತು ಅಂತಿರಲಿ! ನೀವು ಮತ್ತು ನಿಮ್ಮ ಒಳಗದವರು ಬರಗಾಲದ ಕ್ಷೋಭೆಯಿಂದ ಪಾರಾಗಲು ನಾನು ಒಂದು ಉಪಾಯವನ್ನು ಕಲ್ಪಿಸಿಕೊಡಬಲ್ಲೆ!

**ಬ್ರಾಹ್ಮಣ:**—(ಸಂತೋಷಗೊಂಡು) ಪುಣ್ಯಾತ್ಮರೆ, ನಿಮ್ಮುಪಕಾರವನ್ನು ಎಂದೆಂದಿಗೂ ಮರೆಯಲಾರೆ! ಹೇಗಾದರೂ ನಮ್ಮನ್ನು ಬದುಕಿಸಿರಿ!

**ಮುಜು:**—ಊಟಬಡಿಸಲು ಅನನುಕೂಲವಾದರೆ ಅನ್ನವಿಕ್ಕುವ ಮನೆಯನ್ನಾದರೂ ತೋರಿಸಬೇಕಂತೆ! ಅಂತೆಯೇ ನನಗೆ ನಿಮ್ಮ ಕಷ್ಟವನ್ನು ನಿವಾರಿಸಲು ಸಾಧ್ಯವಿಲ್ಲದಿದ್ದರೂ, ಸಾಧ್ಯವಿರುವವರನ್ನು ತೋರಿಸಿಕೊಡಬಲ್ಲೆ.

**ಬ್ರಾಹ್ಮಣ:**—ಅಂತಹರು ಯಾರು?

**ಮುಜು:**—ಹೇಳುತ್ತೇನೆ. ಆದರೆ ಅವರ ಸಹಾಯಬೇಡಲು ನಿಮಗೆ ಹೇಳಿಕೊಟ್ಟುದು ನಾನು ಎಂಬುದು ಪ್ರಕಟವಾದರೆ ನನ್ನ ಪ್ರಾಣಕ್ಕೆ ಬಂದೀತು.

**ಬ್ರಾಹ್ಮಣ:**—ಪಥ್ಯಕೊಟ್ಟ ಕೈಯನ್ನು ಕಚ್ಚುವುದೆ? ಖಂಡಿತವಾಗಿಯೂ ಆ ವಿಷಯವನ್ನು ಗೋಪ್ಯವಾಗಿರಿಸುವೆನು.

**ಮುಜು:**—ನಮ್ಮ ಮಂಗಳವೇಢೆಯ ಠಾಣೆದಾರ ದಾಮಾಜಿಪಂತರನ್ನು ಬಲ್ಲಿರಾ?

**ಬ್ರಾಹ್ಮಣ:**—ಚೆನ್ನಾಗಿ ಬಲ್ಲೆ. ಅವರು ಎಷ್ಟೋ ಬಾರಿ ನಮ್ಮ ಪಂಢರಪುರಕ್ಕೆ ಬಂದಿರುವರು.

**ಮುಜು:**—ಅವರು ದಯಾವಂತರು. ನೀವು ಅವರಲ್ಲಿಗೆ ಹೋಗಿ ನಿಮ್ಮ ಕಷ್ಟಸಂಕಷ್ಟಗಳನ್ನು ಕುರಿತು ಮೊರೆಯಿಡಿರಿ. ಅವರು ನಿಶ್ಚಯವಾಗಿಯೂ ನಿಮ್ಮನ್ನು ರಕ್ಷಿಸುವರು.

**ಬ್ರಾಹ್ಮಣ:**—ನಾನು ನಿಮಗೆ ತುಂಬಾ ಕೃತಜ್ಞನು. ಹಾಗೆಯೇ ಮಾಡು ತ್ತೇನೆ.

**ಮುಜು:**—ಪಾಪ! ಹೆಚ್ಚಿಗೆ ಮಾತನಾಡುವ ಚೈತನ್ಯ ಕೂಡ ನಿಮಗಿಲ್ಲ. ಈಗಲೇ ಹೊರಡಿರಿ.

**ಬ್ರಾಹ್ಮಣ:**—ನಮಸ್ಕಾರ. ಹೋಗಿ ಬರುವೆನು. [ಹೋಗುವನು.]

**ಮುಜು:**—ಶಂಕರ್ರಾ, ನಾನು ಹೂಡಿದ ತಂತ್ರವನ್ನು ತಿಳಿದೆಯಾ?

**ಶಂಕರ್ರಾ:**—ಅದೇನು?

**ಮುಜು:**—ನಿನ್ನ ಬುದ್ಧಿಯು ಕೆಲವು ಸರ್ತಿ ಚುರುಕಿದ್ದರೆ ಕೆಲವು ಸರ್ತಿ ಮಂದ. ನಾನು ಹೇಳುವುದನ್ನು ಚೆನ್ನಾಗಿ ಗಮನಿಸು. ಕ್ಷಾಮಕ್ಕೀಡಾದ ಎಲ್ಲಾ ಜನರು ಆಹಾರಕ್ಕಾಗಿ ಕ್ಷಿಪ್ರದಲ್ಲಿ ಠಾಣೇದಾರರನ್ನು ಮರೆಹೊಗುವಂತೆ ನಾವು ಅವರನ್ನು ಪ್ರೇರಿಸಬೇಕು. ದಾಮಾಜಿಯವರು ಕ್ಷಾಮವನ್ನು ಕುರಿತು ಬಾದಷಹ ರಿಗೆ ಮನವಿಯನ್ನು ಕಳುಹಿಸಿಕೊಡುವಷ್ಟು ಅನುವನ್ನಾದರೂ ಕೊಡಬಾರದು. ಜನರ ಹಾಹಾಕಾರದಿಂದ ಸಂತಾಪಗೊಳ್ಳುವ ಅವರು ಸರಕಾರಿ ಧಾನ್ಯಸಂಚಯದ ಧಾನ್ಯಗಳನ್ನಾದರೂ ಕೊಟ್ಟೇ ಕೊಡುವರು. ಒಡನೆಯೆ ಆ ವಿಷಯವನ್ನು ಸುಲ್ತಾನ್ ಬಾದಷಹರಿಗೆ ತಿಳಿಸಿದರಾಯಿತು. ಮುಂದಿನ ವಿಚಾರವನ್ನು ನೀನೇ ನೋಡುವೆಯಂತೆ!

**ಶಂಕರ್ರಾ:**—ಮುಂದಿನ ವಿಚಾರವನ್ನೂ ಹೇಳುತ್ತೇನೆ. ಪಾಚಾತ್ಯರು ಕೋಪದಿಂದ ಕನಲಿ ಆ ದಾಮಾಜಿಯವರಿಗೆ ಶಿಕ್ಷೆಯನ್ನು ವಿಧಿಸುವರು! ಅವರನ್ನು ಠಾಣೇದಾರಹುದ್ದೆಯಿಂದ ತಪ್ಪಿಸುವರು!! ಆ ಪದವಿಗೆ ಮತ್ತೆ ಯೋಗ್ಯ ರಾರು? ಅದು ನಿಮಗೇ ಲಭಿಸುವುದು!!! ಮತ್ತು ಹೇಳಬೇಕೆ?—ನಾನು ನಿಮ್ಮ ಬಲಗೈಯಾಗುವೆನು!!!!

**ಮುಜು:**—(ಸಂತೋಷದಿಂದ ಹಿಗ್ಗಿ) ನಿಶ್ಚಯ, ನಿಶ್ಚಯ. ಚೆನ್ನಾಗಿ ಊಹಿ ಸಿದೆ. ದೈವವೂ ನಮಗೊಲಿದಿರಬೇಕು. ಇಲ್ಲದಿದ್ದರೆ ಹುಡುಕುವವನಿಗೆ ಮದ್ದಿನ ಬಳ್ಳಿಯು ಕಾಲಿಗೆ ತೊಡಕುವಂತೆ ನಮಗೆ ಇಂತಹದೊಂದು ಸುಸಂದ ರ್ಭವು ಅನಾಯಾಸವಾಗಿ ದೊರೆಯುವುದೇ? (ತವಕಗೊಂಡು) ನಾವೀಗಲೇ ಪಂಢರಪುರಕ್ಕೆ ಹೋಗಿ ಕ್ಷಾಮಪೀಡಿತರು ಆಹಾರಕ್ಕಾಗಿ ದಾಮಾಜಿಯವರನ್ನು ಆಶ್ರಯಿಸುವಂತೆ ಚಮತ್ಕಾರವಾಗಿ ಸೂಚಿಸಬೇಕು. ಅಲ್ಲದೆ ಆ ಊರಿನ ಸರಹದ್ದುಗಳಿಗೂ ಹೋಗಿ ನಮ್ಮ ಉದ್ದಿಷ್ಟಕಾರ್ಯವನ್ನು ಮಾಡಬೇಕು. (ಮೀಸೆತಿರುವಿ) ಸಾಧಿಸಿದರೆ ಸಬಳ ನುಂಗಬಹುದಂತೆ! ಈ ಮುಜುಮ್ದಾರನ ಸಾಹಸವನ್ನು ನೀನೇ ನೋಡುವೆಯಂತೆ!

**ಶಂಕ್ರು:**—ಶಹಭಾಸ್! ಯಜಮಾನರೇ, ಶಹಭಾಸ್!! ನಿಮ್ಮ ಧೈರ್ಯ, ಸಾಹಸ, ಕಾರ್ಯದಕ್ಷತೆ—ಒಂದಕ್ಕಿಂತ ಒಂದು ಹೆಚ್ಚಿನದು. ತೀವ್ರ ಹೋಗೋಣ.

[ಇಬ್ಬರೂ ಹೋಗುವರು.]

## ದೃಶ್ಯ ೪.

[ದಾಮಾಜಿಪಂತನ ಮನೆ. ದಾಮಾಜಿಪಂತನು ಕುಳಿತಿರಲು ಪಂಢರಪುರದ ಬ್ರಾಹ್ಮಣನು ಪ್ರವೇಶಿಸುವನು.]

**ದಾಮಾಜಿ:**—(ಎದ್ದು ನಿಂತು) ವೈದಿಕೋತ್ತಮರಿಗೆ ಪ್ರಣಾಮವು (ಎರಗುವನು.)

**ಬ್ರಾಹ್ಮಣ:**—(ಕೈಗಳನ್ನೆತ್ತಿ) ದೀರ್ಘಾಯುರಾರೋಗ್ಯಮಸ್ತು.

**ದಾಮಾಜಿ:**— ಇತ್ತ ವಿಶ್ರಮಿಸಿರಿ.

[ದಾಮಾಜಿಯೂ ಬ್ರಾಹ್ಮಣನೂ ಕುಳಿತುಕೊಳ್ಳುವರು..

**ದಾಮಾಜಿ:**—ತಮ್ಮ ಆಗಮನದಿಂದ ನಮ್ಮ ಮನೆಯು ಪಾವನವಾಯಿತು. ತಾವು ಇಲ್ಲಿಗೆ ಬಂದ ಉದ್ದೇಶವೇನೆಂದು ಅಪ್ಪಣೆಗೊಡಿಸಬೇಕು.

**ಬ್ರಾಹ್ಮಣ:**—ಪೂಜ್ಯರೆ, ನನ್ನ ದುರವಸ್ಥೆಯನ್ನು ನಿಮಗೆ ವಿವರಿಸಿ ಹೇಳುವಷ್ಟು ಚೈತನ್ಯ ಕೂಡ ನನಗಿಲ್ಲವಲ್ಲ! ಬರಗಾಲದ ದೆಸೆಯಿಂದ ಇಂದಿಗೆ ಎರಡು ದಿನಗಳಿಂದ ಉಪವಾಸಬಿದ್ದ ನಾನು ತೀರಾ ಬಳಲಿರುವೆನು.

**ದಾಮಾಜಿ:**—(ಆಶ್ಚರ್ಯಗೊಂಡು) ಎರಡು ದಿನಗಳಿಂದಲೂ ನಿರಾಹಾರಿಯಾಗಿರುವಿರಾ?

**ಬ್ರಾಹ್ಮಣ:**—(ತಲೆಯಲ್ಲಾಡಿಸಿ) ಅಹುದು.

**ದಾಮಾಜಿ:**—(ಸ್ವಗತಂ) ಆಹಾ! ಇವರ ಸ್ಥಿತಿಯು ಕರುಣಾಜನಕವಾಗಿರುವುದು. [ತೆರೆಯ ಕಡೆ ನೋಡಲು, ಸಾವಿತ್ರಿಯು ಪ್ರವೇಶಿಸುವಳು.]

**ದಾಮಾಜಿ:**—(ಪತ್ನಿಯನ್ನು ಕುರಿತು) ಪ್ರಿಯೇ, ಒಳಗಿಂದ ಒಳ್ಳೆಯ ಹಣ್ಣುಹಂಪಲಗಳು ಕೆಲವನ್ನು ಕೊಂಡು ಬಾ.

**ಸಾವಿತ್ರಿ:**—ಮಹದಾಜ್ಞೆ.

[ಸಾವಿತ್ರಿಯು ಒಳಪ್ರವೇಶಿಸಿ ವಿವಿಧಫಲಗಳನ್ನುಳ್ಳ ಹರಿವಾಣವನ್ನು ದಾಮಾಜಿಯ ಕೈಯಲ್ಲಿ ಕೊಡುವಳು.]

**ದಾಮಾಜಿ:**—(ಹರಿವಾಣವನ್ನು ಬ್ರಾಹ್ಮಣನ ಮುಂದಿರಿಸಿ)

ಪದ ೧೩.

ರಾಗ: ತಿಲಕಕಾಮೋದ— ಏಕ್ತಾ
(ಬಹಿರಾಡಂಬರವು ಗೌಣ) ಎಂಬಂತೆ

ಪರಿಗ್ರಹಿಸುವುದೀ ಭೋಜ್ಯವ ।
ನೀಗ ವಿಪ್ರವರ್ಯಾ ॥ ಪಲ್ಲ ॥

ಸಲೆ ಹಸಿವಿನ ಬೇಗೆಯಿಂದ ।
ಬಳಲಿರುವಿರಿ ತಾವದರಿಂ ॥
ಫಲಗಳ ಸೇವಿಸುತೆ ಮೋದ ।
ತಳೆಯುವುದೈ ಜವದೆ ॥ ೧ ॥

ಫಲಾಹಾರದಿಂದ ಹಸಿವನ್ನು ನಿವಾರಿಸಿರಿ.

**ಬ್ರಾಹ್ಮಣ:**—ಹಾಗೆಯೇ ಆಗಲಿ.

[ಫಲಗಳನ್ನು ತಿನ್ನುತ್ತಾ ಬ್ರಾಹ್ಮಣನು ಗಳಗಳನೆ ಅಶ್ರುಧಾರೆಯನ್ನು ಸುರಿಸುವನು.]

**ದಾಮಾಜಿ:**—(ತವಕಗೊಂಡು) ಅದೇನು—ಕಣ್ಣೀರುಸುರಿಸುವಿರಿ? ಏನು ಪ್ರಮಾದವಾಯಿತು? ಹೇಳಿರಿ!

**ಬ್ರಾಹ್ಮಣ:**—ಪೂಜ್ಯರೆ, ಈ ಫಲಗಳನ್ನು ತಿನ್ನುತ್ತಿದ್ದ ಹಾಗೆ ನನಗೆ ನನ್ನ ಹೆಂಡತಿಮಕ್ಕಳ ನೆನಪುಂಟಾಯಿತು. ಎರಡು ದಿನಗಳಿಂದಲೂ ಒಂದು ತುತ್ತು ಅನ್ನಕ್ಕೂ ಆಸ್ಪದವಿಲ್ಲದೆ ಅವರು ಎಷ್ಟು ಕಳವಳಿಸುತ್ತಿರುವರೋ—ಎಂಬುದನ್ನೆಣಿಸಿ ದುಃಖಿತನಾದೆನು!

**ದಾಮಾಜಿ:**—ಅದಕ್ಕಾಗಿ ಚಿಂತಿಸಬೇಕೆ? ತಾವು ಹೆದರಬೇಡಿರಿ. ತಮ್ಮ ಕುಟುಂಬಪೋಷಣೆಗೆ ಬೇಕಾಗುವಷ್ಟು ಆಹಾರಪದಾರ್ಥಗಳನ್ನು ನಾನು ತಮಗೆ ಒದಗಿಸಿ ಕೊಡುವೆನು. ಮೊದಲು ತಮ್ಮ ಹಸಿವನ್ನು ನಿವಾರಿಸಿರಿ.

**ಬ್ರಾಹ್ಮಣ:**—(ಸ್ವಗತಂ) ಆಹಾ! ಇವರ ಔದಾರ್ಯವು ಹೊಗಳತಕ್ಕುದಾಗಿದೆ. (ಪ್ರಕಾಶಂ) ಮಹಾನುಭಾವರೆ, ನಿಮ್ಮ ಬಂಧುಪ್ರೇಮವು ಶ್ಲಾಘನೀಯವಾಗಿದೆ. ನಿಮ್ಮಿಚ್ಛೆಯಂತಾಗಲಿ. [ಫಲಾಹಾರಮಾಡುವನು.]

[ನಿಧಾನವಾಗಿ ಫರದೆ ಬೀಳುವುದು.]

## ದೃಶ್ಯ ೫.

[ರಾಜವೀಥಿಯಲ್ಲಿ ಪಂಥರಪುರದ ಬ್ರಾಹ್ಮಣನೂ ಧಾನ್ಯಚೀಲಗಳೆರಡನ್ನು ಹೊತ್ತ ದಾಮಾಜಿಪಂತನ ಸೇವಕನೂ ಪ್ರವೇಶಿಸುವರು.]

**ಬ್ರಾಹ್ಮಣ:**—(ಸಂತೋಷದಿಂದ ಹಿಗ್ಗಿ ಸ್ವಗತಂ) ಯಮಸದನವನ್ನು ಸೇರಲಿದ್ದ ನನ್ನ ಪಂಚಪ್ರಾಣಗಳು ಮರಳಿ ಬಂದುವು. ಆ ಪಾಂಡುರಂಗನ ಅನುಗ್ರಹದಿಂದ ಹೇಗಾದರೂ ಬದುಕಿಕೊಂಡೆ. ಮಾತ್ರವಲ್ಲ; ಇನ್ನು ಮುಂದಾದರೂ ಬದುಕಿಕೊಳ್ಳಲು ಉಪಾಯಮಾಡಿದೆ. ದಾಮಾಜಿಪಂತರು ಈಗ ಎರಡು ಚೀಲ ಜೋಳವನ್ನು ಕೊಟ್ಟಿರುವರು. ಇದು ಮುಗಿಯುವಾಗ ತಿರುಗಿ ಕೊಡುವೆನೆಂದೂ ಹೇಳಿರುವರು. ಅವರಿಗೆ ವಿಠೋಬನು ಮಂಗಳವನ್ನುಂಟುಮಾಡಲಿ! (ಸೇವಕನನ್ನು ಕುರಿತು) ಮಹಾರಾಯಾ, ನನ್ನ ಮನೆಯವರು ಹೊಟ್ಟೆಗೆ ಕೂಳಿಲ್ಲದೆ ಎಷ್ಟು ಕಳವಳಪಡುತ್ತಿರುವರೊ! ಬೇಗ ಬೇಗ ನಡೆಯಬಾರದೆ?

**ಸೇವಕ:**—(ಸ್ವಗತಂ) ಆಗ ಅಳುತ್ತಿದ್ದ ಪಾಪದ ವಿಪ್ರರು ಈಗ ಜೋರಾದರಲ್ಲ!

[ಹೋಗುವರು.]

[ಅಂಕದ ಘರದೆ ಬೀಳುವುದು.]

— ಇಂತಿದು ದ್ವಿತೀಯಾಂಕಂ —

# ಮೂರನೆಯ ಅಂಕ

## ದೃಶ್ಯ ೧.

[ಸ್ಥಳ: ಪಂಢರಪುರದ ಸರಹದ್ದಿನಲ್ಲಿರುವ ಒಂದು ಬೀದಿ. ನಾಲ್ವರು ಸಂತರು ಪ್ರವೇಶಿಸುವರು. ಮೊದಲನೆಯುವನು ಮೊದಲು ಹಾಡಲು, ಇಬ್ಬರು ಮಾತ್ರ ಅವನನ್ನು ಅನುಕರಿಸಿ ಹಾಡುವರು. ಒಬ್ಬನು ಮಾತ್ರ ತುಟಿಯನ್ನೂ ಅಲ್ಲಾಡಿಸದೆ ಸುಮ್ಮನೆ ನಿಲ್ಲುವನು.]

**೧ನೆಯವ:**—ಜೈ ಜೈ ವಿಠ್ಠಲ—ಜೈ ಜೈ ವಿಠ್ಠಲ.

### ಪದ ೧೪.

ರಾಗ: ಪೀಲುಕಾಲಂಗಡಾ—ಉಗಡಾ

(ಏಕದಿನ್ ಜಾನಾರೆ ಭಾಯಿ) ಎಂಬಂತೆ

ದಿಟದಿಂ ಸಾಯುಲಿರುವೆ ನೋಡು । ಮನುಜಾ ।
ವಿಠಲಭಜನೆ ಮಾಡು ॥ ಪಲ್ಲ ॥

ಹೊತ್ತಿಹೆ ಮಮಕಾರವನವಿದ್ಯೆಯಿಂ ।
ಸತ್ಯವ ತಿಳಿಯದೆ ಮೂಢಾ ॥
ನಿತ್ಯಸುಖದ ಪಥವಿದೆ, ನೀ ಬರಿದೆ ।
ಹೊತ್ತುಗಳೆಯಬೇಡಾ ॥ ೧ ॥

ದೇಹಾತ್ಮಕಬುದ್ಧಿಯ ತೊರೆಯುತೆ ನಿ ।
ನ್ನಾತ್ಮತತ್ತ್ವವನು ನೋಡು ॥
ಮೋಹವ ಕಳೆಯುತಪಾರಸೌಖ್ಯಸಂ ।
ದೋಹದಿ ನಲಿದಾಡು ॥ ೨ ॥

ಕರ್ಮಯೋಗದಾ ಮರ್ಮವರಿತು ಹಿತ ।
ಕರ್ಮಗಳನೆ ಮಾಡು ॥
ಧರ್ಮ, ಜ್ಞಾನ, ವೈರಾಗ್ಯದೊಳಭವನ ।
ನೇಮದಿ ಕೊಂಡಾಡು ॥ ೩ ॥

ವ್ಯಕ್ತಾವ್ಯಕ್ತ ಪರಾತ್ಪರಮೂರ್ತಿಯ ।
ಚಿಂತನೆಯನು ಮಾಡು ॥
ಸತ್ಯವಂತನಾನಂತನ ಧ್ಯಾನದಿ ।
ಶಾಂತಿವಧುವ ಕೂಡು ॥ ೪ ॥

ನಮಃ ಪುಂಡಲೀಕವರದ ಪಾಂಡುರಂಗ ಹರಿ ವಿಠ್ಠಲ್! (ಎಲ್ಲರನ್ನು ಕುರಿತು) ಸಂತರೇ, ಮಹಾವಿಷ್ಣುವು ನಾರದಮಹರ್ಷಿಯವರಿಗೆ ಅಪ್ಪಣೆಗೊಡಿಸಿದ ವಾಕ್ಕನ್ನು ಕೇಳಿರುವಿರಾ?

**೩ನೆಯವ ಮತ್ತು ೪ನೆಯವ:**—(ಆತುರಗೊಂಡು) ಅದಾವುದು?

**೧ನೆಯವ:**— ಲಾಲಿಸಿರಿ!

"ವೈಕುಂಠದಲ್ಲಿ ವಾಸಿಸುವುದಿಲ್ಲವು ನಾನು; ।
ಯೋಗಿಹೃದಯದೊಳಿಲ್ಲ; ಸೂರ್ಯನೊಳಗಿಲ್ಲ; ॥
ಎನ್ನ ಭಕ್ತರು ಎಲ್ಲಿ ಪಾಡುತಿಹರೋ ಅಲ್ಲಿ ।
ನೆಲೆಗೊಳ್ಳುವೆನು ನಾನು ನಾರದಮುನಿವರಾ" ॥

**೩ನೆಯವ:**— ಆಹಾ! ಪರಮಾತ್ಮನ ಭಕ್ತವಾತ್ಸಲ್ಯವು ಅಪಾರವಾದುದೇ ಸರಿ.

**೪ನೆಯವ:**— ಭಕ್ತವಾತ್ಸಲ್ಯದಿಂದಾಗಿ ಭಕ್ತರ ಭೃತ್ಯತ್ವವನ್ನೂ ವಹಿಸಲು ಆ ಪರಮಾತ್ಮನು ಸಂಕೋಚಪಡನು. ಇಲ್ಲದಿದ್ದರೆ ಅವನು ಅರ್ಜುನನ ಸಾರಥಿತ್ವವನ್ನು ವಹಿಸುತ್ತಿದ್ದನೇ?

**೧ನೆಯವ:**— ನಿಜ. ಚೆನ್ನಾಗಿ ಹೇಳಿದೆ. (೨ನೆಯವನನ್ನು ಕುರಿತು) ಎಲವೊ, ಭಜನೆಮಾಡುವಾಗ ಯಾವಾಗಲೂ ಮುಂದೆ ಬರುತ್ತಿದ್ದ ನೀನು ಇಂದು ಹಿಂದೆ ನಿಂತಿರುವೆಯಲ್ಲ!

**೨ನೆಯವ:**— (ನಿಟ್ಟುಸಿರುಬಿಟ್ಟು) ಏನು ಭಜನೆಯೋ— ನಾನರಿಯೆ. ಹಸಿವಿಂದ ಪ್ರಾಣಗಳು ದೇಹದಿಂದ ವಿಭಜನೆಹೊಂದಲು ಆರಂಭಿಸಿರುವಾಗ ಭಜನೆ ಯಾರಿಗೆ ಬೇಕು? ಪ್ರಕೃತ ಬೇಕಾದುದು ಭಜನೆಯಲ್ಲ — ಭೋಜನ.

**೧ನೆಯವ:**— ನಿನ್ನಂತರಂಗವು ಈಗ ಬಹಿರಂಗವಾಯಿತು! ಸಾಧುವೆನ್ನಿಸಿಕೊಂಡಿರುವ ನೀನೇ ಭಜನೆಯನ್ನು ತಿರಸ್ಕರಿಸುವುದಾದರೆ ಇತರ ಸಾಮಾನ್ಯ ಜನರ ಪಾಡೇನು?

**೨ನೆಯವ:**— ಉಪವಾಸದಿಂದ ಜೀವಾತ್ಮನು ತಳಮಳಿಸುತ್ತಿರುವಾಗ ಅನ್ನ ಕೊಡದ ಆ ಭಜನೆ ಮತ್ತಾವ ಸಾರ್ಥಕತೆಗೆ?

**೩ನೆಯವ:**— ಮೋಕ್ಷಸಾಧನೆಯೇ ನಮ್ಮ ಧ್ಯೇಯವಾಗಿರಲು ಪ್ರಾಪಂಚಿಕ ಸುಖದುಃಖಗಳನ್ನು ಸಮತಾದೃಷ್ಟಿಯಿಂದ ನೋಡಬೇಕಾದುದು ನಮ್ಮ ಕರ್ತವ್ಯ. ಬರಗಾಲವಂತಿರಲಿ! ಪ್ರಳಯಕಾಲವೇ ಈಗ ಪ್ರಾಪ್ತವಾದರೂ ಹೇಡಿಗಳಂತೆ ನಾವು ಅಂಜಬಾರದು.

**೧ನೆಯವ:**—ಸರಿ. ಒಪ್ಪತಕ್ಕ ಮಾತು. ಸಾಧುಲಕ್ಷಣವನ್ನು ಚೆನ್ನಾಗಿ ಹೇಳಿದೆ!

**೪ನೆಯವ:**—(೧ನೆಯುವನನ್ನು ಕುರಿತು) ಗುರು ಮಹಾರಾಜ್! "ಅಂತ ಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ | ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ" ಎಂದು ಶ್ರೀಕೃಷ್ಣಪರಮಾತ್ಮನೇ ಹೇಳಿರುವನಲ್ಲವೆ? ಸಾಯುವುದಾದರೂ ವಿಠಲನಾಮಸ್ಮರಣೆಯನ್ನು ಮಾಡಿಯೇ ಸಾಯೋಣ.

**೧ನೆಯವ:**—ಚೆನ್ನಾಗಿ ಹೇಳಿದೆ. ನಾವೀಗಲೇ ಪಂಢರಪುರಕ್ಕೆ ಹೋಗಿ ವಿಠೋಬನ ಚರಣಸರೋಜಗಳಲ್ಲಿ ನಮ್ಮ ಪ್ರಾಣಗಳನ್ನರ್ಪಿಸಿ, ನಿಶ್ಚಿಂತೆಯಿಂದ ಆತನನ್ನು ಭಜಿಸುತ್ತಲಿರೋಣ. ನಮ್ಮನ್ನು ಉಳಿಸುವುದು ಅಥವಾ ಅಳಿಸುವುದು ಆತನಿಗೆ ಸೇರಿದೆ.

**೩ನೆಯವ ಮತ್ತು ೪ನೆಯವ:**—ಹಾಗೆಯೇ ಮಾಡೋಣ.

[೧ನೆಯುವನು ಈ ಕೆಳಗಿನ ಭಜನಗೀತವನ್ನು ಮೊದಲು ಹಾಡಲು, ೩ನೆಯುವನು ಮತ್ತು ೪ನೆಯುವನು ಅವನನ್ನು ಅನುಕರಿಸಿ ಹಾಡುವರು.]

### ಪದ ೧೫.

ರಾಗ: ಯಮುನಾಕಲ್ಯಾಣ ಸಂಪೂರ್ಣ—ದುಮಾಳಿ

ಜಯಜಯ ಶ್ರೀ ಪಾಂಡುರಂಗಾ |
ಜಯಜಯ ಶ್ರೀ ಮಂಗಳಾಂಗಾ || ೧ ||

ಶ್ರಿತಪಾಲಾ, ಪೂರ್ಣಲೀಲಾ, |
ನುತಶೀಲಾ, ಗಾನಲೋಲಾ || ೨ ||

ಹಿತದಾತಾ, ಭಕ್ತಪ್ರೀತಾ, |
ಶ್ರುತಚರಿತಾ, ದೀನನಾಥಾ || ೩ ||

ರಣಧೀರಾ, ವೇದಸಾರಾ |
ಗುಣಶೂರಾ, ಜಯ ಪರಾತ್ಪರಾ || ೪ ||

[ಎಲ್ಲರೂ ಹೋಗುವರು.]

## ದೃಶ್ಯ ೨.

[ಸ್ಥಳ: ಪಂಢರಪುರಕ್ಕೆ ಸಮೀಪದಲ್ಲಿ ನಿರ್ಜನಪ್ರದೇಶ. ರಾಮದಾಸನೂ, ಪತ್ನೀ ಪುತ್ರರನ್ನೊಡಗೊಂಡ ಜೋಶಿಯೂ ಪ್ರವೇಶಿಸುವರು.]

**ಜೋಶಿಯ ಪತ್ನಿ:**—(ಜೋಶಿಯನ್ನು ಕುರಿತು) ನಾಥಾ, ಉಪವಾಸದ ಈ ಸಂಕಟವನ್ನು ಸಹಿಸಲಾರೆ.

**ಜೋಶಿಯ ಪುತ್ರ:**—ಅಪ್ಪಾ, ಹೊಟ್ಟೆಯಲ್ಲಿ ಹಸಿವಿನ ಬೆಂಕಿಯು ಧಗ ಧಗನೆ ಉರಿಯುತ್ತಿರುವುದು. ಏನು ಮಾಡಲಿ?

**ಜೋಶಿ:**—ಮಗೂ, ಸ್ವಲ್ಪ ಸಂತೈಸು. ಪಂಢರಪುರದ ಆ ಪಾಂಡು ರಂಗನೇ ನಮ್ಮನ್ನು ರಕ್ಷಿಸುವನು. (ರಾಮದಾಸನನ್ನು ಕುರಿತು) ರಾಮದಾಸರೇ, ಧನಾಢ್ಯನಾದ ನಾನು ಈಹೊತ್ತು ಒಂದು ತುತ್ತು ಅನ್ನಕ್ಕೂ ಮಾರ್ಗವಿಲ್ಲದೆ ಹೆಂಡತಿಮಕ್ಕಳನ್ನು ಹಿಡಕೊಂಡು ತೊಳಲಬೇಕಾಯಿತಲ್ಲ!

**ರಾಮದಾಸ:**—ಜೋಶಿಯವರೇ, ಹಣವನ್ನೇ ತಿನ್ನಲಾಗುವುದೆ? ಬರಗಾಲ ವೆಂದರೆ ಊರಿಗೆ ಬರುವ ಮಾರಿ. ಅದು ದರಿದ್ರರನ್ನು ಪೀಡಿಸುವಂತೆ ಧನಿಕರ ನ್ನಾದರೂ ಪೀಡಿಸುವುದು.

**ಜೋಶಿಯ ಪತ್ನಿ:**—(ಕುಳಿತುಕೊಂಡು) ನಾಥಾ, ಹಸಿವು ಒಂದೆಡೆ; ನಡೆ ನಡೆದು ಕಾಲುನೋವು ಒಂದೆಡೆ— ಇಂತಹ ಕಷ್ಟಗಳನ್ನು ಅನುಭವಿಸುವುದಕ್ಕಿಂತ ಸಾಯುವುದೇ ಲೇಸು.

**ಜೋಶಿಯ ಪುತ್ರ:**—ಅಪ್ಪಾ, ಅಮ್ಮನು ಸಾಯುವುದಾದರೆ ಅವಳೊಂದಿಗೆ ನಾನೂ ಸಾಯುತ್ತೇನೆ.

**ಜೋಶಿ:**—(ಸ್ವಗತಂ) ಇವರ ಪರಿತಾಪವನ್ನು ಕಣ್ಣಾರೆ ಹೇಗೆ ಕಾಣಲಿ? (ಪ್ರಕಾಶಂ) ಪ್ರಿಯೇ, ಕಷ್ಟಕಾಲದಲ್ಲಿ ಧೈರ್ಯವನ್ನು ಅವಲಂಬಿಸಬೇಕೆಂಬ ತತ್ತ್ವವು ನಿನಗೆ ಗೊತ್ತಿಲ್ಲವೆ?

**ರಾಮದಾಸ:**—ಜೋಶಿಯವರೇ, (ಕೈಬೆರಳಿಂದ ತೋರಿಸಿ) ಅಲ್ಲೊಂದು ಸರೋವರವು ಕಾಣಿಸುತ್ತಿರುವುದು. ಸ್ವಲ್ಪ ನೀರನ್ನಾದರೂ ಕುಡಿದು ಆ ಸಾಲು ಮರಗಳ ನೆರಳಲ್ಲಿ ವಿಶ್ರಮಿಸೋಣ!

**ಜೋಶಿ:**—ನಿಮ್ಮ ಆಲೋಚನೆಯು ವಿಹಿತವಾದುದು. ಹಾಗೆಯೇ ಮಾಡೋಣ. (ಪತ್ನಿಯನ್ನು ಕುರಿತು) ಪ್ರಿಯೇ, ದಣುವನ್ನಾರಿಸಲು ಆ ಸರೋವರ ದೆಡೆಗೆ ಹೋಗೋಣ. (ಪುತ್ರನನ್ನು ಕುರಿತು) ಮಗೂ, ಬಾ.

[ಎಲ್ಲರೂ ಸರೋವರದೆಡೆಗೆ ಹೋಗುವರು.]

[ದುರ್ಭಿಕ್ಷಕ್ಕೀಡಾದ ಜನರ ಒಂದು ತಂಡವು ಪ್ರವೇಶಿಸುವುದು.]

ಪದ ೧೬.

ಿನೆಯವ:

ರಾಗ: ಪಹಾಡಿ— ಎಕ್ಕಾ
(ಹೇಗೆ ಪಾರುಮಾಡುವಿ) ಎಂಬಂತೆ

ತಾಳಲೆಂತು ಕ್ಷುಧೆಯಾ । ಬಾಳ ಬೇಗೆಯಿಂದ ನಾವ್ ।
ಗೋಳ ಕೇಳಲಾರೆಯಾ । ಲಕ್ಷ್ಮೀಲೋಲಾ ॥ ಪಲ್ಲ ॥

ಕರುಣಾಕರನೆನಿಸಿ । ನಿರ್ದಯೆಯನು ನೀ ತೋರಿ ।
ಬರಿದಿರುವರೆ ದೇವಾ । ಪರಮಾತ್ಮ ಸುಪ್ರಭಾವಾ ।
ಪರಿಪಾಲಿಸು ದೀನರಾ । ದೇವಾಧೀಶಾ ॥ ೧ ॥

೨ನೆಯವ:—ದೇವರು ಕರುಣಾಸಾಗರನೆಂಬುದನ್ನು ಹೇಗೆ ನಂಬಲಿ? ಎಷ್ಟು ವಿಧದಿಂದ ಕೂಗಿದರೂ ಅವನು ನಮ್ಮ ಮೊರೆಯನ್ನು ಕೇಳುವುದಿಲ್ಲವಲ್ಲ!

೩ನೆಯವ:—ನಿಜ. ಇಂದಿಗೆ ಮೂರು ದಿನಗಳಿಂದ ನಮ್ಮನ್ನು ಉಪವಾಸಕ್ಕೆ ಬಲಿಹಾಕಿದ ದೇವರು ದಯಾಹೀನನೇ ಸರಿ.

೪ನೆಯವ:—ವೃಥಾ ನಾಸ್ತಿಕವಾದವನ್ನು ಮಾಡದಿರಿ. ನಮ್ಮ ಪ್ರಾಕ್ಕೃತ ಕರ್ಮದೋಷಕ್ಕಾಗಿ ದೇವರನ್ನು ದೂರಲೇಕೆ?

೧ನೆಯವ:—"ಬರೀ ಗುಲ್ಲು ನಿದ್ದೆಗೇಡು" ಎಂಬಂತೆ ವಾದವಿವಾದಗಳಿಂದೇನೂ ಫಲವಿಲ್ಲ. ದೇವರಲ್ಲಿ ವಿಶ್ವಾಸವಿಟ್ಟು ಮುಂದೆ ಹೋಗೋಣ. ಅವನು ನಮ್ಮನ್ನು ರಕ್ಷಿಸುವನು.

[ಮುಜುಮುದ್ದಾರನು ಪ್ರವೇಶಿಸುವನು.]

ಮುಜು:—(ಸ್ವಗತಂ) ಶಂಕ್ರ್ರುವು ಹೇಳಿದಂತೆ ಬರಗಾಲಕ್ಕೀಡಾದ ಜನರ ಒಂದು ತಂಡವು ಇಲ್ಲಿರುವುದು. ನನ್ನ ಕೆಲಸವನ್ನು ಜಾಗ್ರತೆಯಾಗಿ ನೆರವೇರಿಸುವೆನು. (ಪ್ರಕಾಶಂ) ಬಾಂಧವರೇ, ಈ ನಿರ್ಜನಪ್ರದೇಶದಲ್ಲಿ ಇದೇನು ಮಾಡುತ್ತಿರುವಿರಿ?

೧ನೆಯವ:—ಮಹಾಶಯರೆ, ನಮ್ಮ ಪಂಢರಪುರಪ್ರಾಂತದಲ್ಲಿ ಭಯಂಕರಕ್ಷಾಮವು ತಲೆದೋರಿರುವುದು. ಒಂದು ತುತ್ತು ಅನ್ನಕ್ಕೂ ಆಸ್ಪದವಿಲ್ಲದೆ ನಾವೆಲ್ಲರೂ ಮೂರು ದಿನಗಳಿಂದ ನಿರಾಹಾರಿಗಳಾಗಿರುವೆವು. ಹೀಗಾಗಿ ಆಹಾರವನ್ನು ಹುಡುಕಿ ತಿರುಗಲಾರಂಭಿಸಿರುವೆವು.

ಮುಜು:— ಆಹಾ! ನಿಮ್ಮ ಅವಸ್ಥೆಯು ಶೋಚನೀಯವು. ಭೂಲೋಕದ

ಅಮರಾವತಿಯಂತಿರುವ ನಮ್ಮ ಮಂಗಳವೇಢೆಯಲ್ಲಿರುತ್ತಿದ್ದರೆ ನಿಮಗೆ ಇಂತಹ ಸಂಕಟ ಪ್ರಾಪ್ತವಾಗುತ್ತಿದ್ದಿತೇ?

**೧ನೆಯವ:** — ಮಂಗಳವೇಢೆಯಲ್ಲಿ ಕ್ಷಾಮವಿಲ್ಲವೇ?

**ಮುಜು:** — ಇಲ್ಲ. ಒಂದು ವೇಳೆ ಬಂದರೂ ಭಯವಿಲ್ಲ. ಏಕೆಂದರೆ ಸರಕಾರಿ ಧಾನ್ಯಭಂಡಾರವು ಅಲ್ಲಿರುವುದು.

[ರಾಮದಾಸ, ಜೋಶಿ ಇತ್ಯಾದಿಯವರು ಮುಂದೆ ಬರುವರು.]

**೧ನೆಯವ:** — ಹಾಗಾದರೆ ನಾವೀಗ ಮಂಗಳವೇಢೆಗೆ ಬಂದರೆ ನಮ್ಮ ಸಂಕಷ್ಟನಿವಾರಣೆಯಾಗಬಹುದೇ?

**ಮುಜು:** — ಆದರೆ . . . .

**೨ನೆಯವ:** — ಆದರೆ ಎಂಬುದು ಸಂಶಯಾತ್ಮಕಪದವು.

**ಮುಜು:** — ಸರಕಾರಿ ಧಾನ್ಯಕೋಶವು ಠಾಣೆದಾರ ದಾಮಾಜಿಪಂತರ ವಶದಲ್ಲಿರುವುದು. ಅವರು ಮನಸ್ಸುಮಾಡಿದರೆ ನೀವೆಲ್ಲರೂ ಬದುಕಬಹುದು.

**೧ನೆಯವ:** — ದಾಮಾಜಿಪಂತರೇ! ಅವರನ್ನು ಚೆನ್ನಾಗಿ ಬಲ್ಲೆನು. ಬಹಳ ಒಳ್ಳೆಯವರು. ನಮ್ಮನ್ನು ಎಂದಿಗೂ ಬಿಟ್ಟುಹಾಕರು.

**ಮುಜು:** — (ಜೋಶಿಯನ್ನು ನೋಡಿ) ಓಹೋ, ಜೋಶಿಯವರು!

**ಜೋಶಿ:** — ಅಹುದು. ನಮ್ಮ ಅವಸ್ಥೆ ಹೇಳಿತೀರದು. ದಾಮಾಜಿಪಂತರನ್ನು ಆಶ್ರಯಿಸಿದರೆ ನಮ್ಮ ಕಷ್ಟನಿವಾರಣೆಯಾಗುವುದಲ್ಲವೆ?

**ಮುಜು:** — ಖಂಡಿತವಾಗಿಯೂ ಆಗುವುದು. ನೀವೀಗಲೇ ಮಂಗಳವೇಢೆಗೆ ನಡೆದು ದಾಮಾಜಿಪಂತರಿಗೆ ಶರಣುಹೋಗಿರಿ! (ಆಲೋಚಿಸಿ) ಆದರೆ ಇದೊಂದನ್ನು ಮರೆಯದಿರಿ. ನಾನು ದಾಮಾಜಿಪಂತರ ಕರಣೀಕನು. ಅವರ ಸಹಾಯ ಬೇಡಲು ನಿಮ್ಮನ್ನು ಪ್ರೇರಿಸಿದವನು ನಾನೆಂಬ ವಿಚಾರವು ಯಾರಿಗೂ ಗೊತ್ತಾಗಬಾರದು. ಗೊತ್ತಾದರೆ ನನಗೆ ಕೇಡು ಸಂಭವಿಸೀತು! ಹೀಗಾದುದರಿಂದ ವಿಷಯವನ್ನು ಪ್ರಕಟಿಸದಿರಿ!

**ಜೋಶಿ:** — ಛೆ ಛೆ! ಉಂಡ ಮನೆಗೆರಡನ್ನು ಬಗೆಯುವ ಅಧಮರು ನಾವಲ್ಲ.

**೧ನೆಯವ:** — (ಮುಜುಮ್ದಾರನನ್ನು ಕುರಿತು) ಉಪಕಾರಕ್ಕೆ ಪ್ರತಿಯಾಗಿ ಅಪಕಾರಗೈಯುವ ಚಾಂಡಾಲರು ನಾವಲ್ಲ. ನೀವು ನಮ್ಮ ವಿಷಯದಲ್ಲಿ ತೋರಿದ ಆದರಕ್ಕಾಗಿ ನಾವು ನಿಮಗೆ ಕೃತಜ್ಞರೇ ಸರಿ.

**ಮುಜು:**—ಕೈಲಾದಮಟ್ಟಿಗೆ ಪರೋಪಕಾರಮಾಡಬೇಕಾದುದು ಮನುಷ್ಯ ಧರ್ಮ. ಪಾಪ! ತುಂಬ ಬಳಲಿರುವಿರಿ. ತೀವ್ರ ಹೊರಡಿರಿ.

**ಜೋಶಿ** ಮತ್ತು **ಗನೆಯವ:**—ಹಾಗೆಯೇ ಮಾಡುವೆವು.

[ಕ್ಷಾಮಪೀಡಿತರೆಲ್ಲರೂ ಹೋಗುವರು.]

**ಮುಜು:**—(ವ್ಯಂಗ್ಯವಾಗಿ ನಕ್ಕು ಸ್ವಗತಂ) ಈ ಮಾರಿಗಳು ಹೋಗಿ ಕಾಡಿ, ಬೇಡಿ ದಾಮಾಜಿಯವರಿಗೆ ಹೆಚ್ಚಿನ ಉಪದ್ರವವನ್ನು ಕೊಡಲಿ! ಆಗ ನನ್ನ ಹಂಚಿಕೆ ಯಂತೆ ಎಲ್ಲವೂ ಸರಿಬರುವುದು. (ಆಲೋಚಿಸಿ) ಈಗಾಗಲೇ ದುರ್ಭಿಕ್ಷದವರ ಹಲವು ಪಂಗಡಗಳು ಮಂಗಳವೇಢೆಯನ್ನು ಸೇರುವಂತೆ ಮಾಡಿದೆನು. ಇಂತಹ ಇನ್ನೆಷ್ಟು ತಂಡಗಳಿವೆಯೊ ಮುಂದೆ ನೋಡೋಣ. [ಹೋಗುವನು.]

[ಪರದೆ ಬೀಳುವುದು.]

## ದೃಶ್ಯ ೩.

[ದಾಮಾಜಿಪಂತನ ಮನೆ. ದಾಮಾಜಿಪಂತನೂ ಸಾವಿತ್ರಿಯೂ ಕುಳಿತು ಸಂಭಾ ಷಿಸುತ್ತಿರುವರು.]

**ಸಾವಿತ್ರಿ:**—ಪ್ರಾಣೇಶಾ. ಏನೊ ಚಿಂತನೆಯಲ್ಲಿ ಮಗ್ನರಾಗಿರುವಂತೆ ಕಾಣಿಸುವಿರಿ. ಅಂತಹ ವಿಶೇಷವೇನು?

**ದಾಮಾಜಿ:**—ದೇವಿ, ಪಂಢರಪುರಪ್ರಾಂತದಲ್ಲಿ ಭಯಂಕರಕ್ಷಾಮವು ತಲೆದೋರಿರುವುದಷ್ಟೆ! ದುರ್ಭಿಕ್ಷದಿಂದ ಅನಾಥರಾದ ಹಲವರು ನಮ್ಮ ಮಂಗಳ ವೇಢೆಗೆ ಬಂದಿರುವರೆಂದು ಈಗ ತಾನೆ ತಿಳಿದೆನು.

**ಸಾವಿತ್ರಿ:**—ಆಹಾ! ಪಂಢರೀನಾಥನು ತನ್ನ ಪ್ರಾಂತದಲ್ಲೇ ಇಂತಹ ವಿಪ ತ್ತನ್ನು ತಂದೊಡ್ಡಿದನೇಕೆ?

**ದಾಮಾಜಿ:**—ದೈವೇಚ್ಛೆಯನ್ನು ತಿಳಿಯಲು ನಮಗೆ ಸಾಧ್ಯವಿಲ್ಲ. ಅದಂತಿ ರಲಿ. ದೇವಿ, ಕ್ಷಾಮಪೀಡಿತರನ್ನು ಕಾಪಾಡುವ ಬಗೆ ಹೇಗೆ ಎಂಬುದನ್ನು ತಿಳಿ ಯದೆ ನನ್ನ ಮನಸ್ಸು ಬಹಳವಾಗಿ ಕಳವಳಿಸುತ್ತಿರುವುದಲ್ಲ!

**ಸಾವಿತ್ರಿ:**—ನಾಥಾ, ಒಬ್ಬಿಬ್ಬರೇ? ಹಲವರನ್ನು ನಾವು ರಕ್ಷಿಸುವು ದಾದರೂ ಹೇಗೆ? ಅಂತಹ ಭಾಗ್ಯವಿಶೇಷವನ್ನು ಆ ವಿಠೋಬನು ನಮಗೆ ಅನು ಗ್ರಹಿಸಿಲ್ಲವಲ್ಲ!

**ದಾಮಾಜಿ:**—ನಿಜ. ಆದರೆ ಕ್ಷಾಮದಿಂದ ನಮ್ಮ ಬಂಧುಬಾಂಧವರು

ಉಪವಾಸಕ್ಕೀಡಾಗಿ ನರಳುತ್ತಿರುವಾಗ ನಾವು ಮಾತ್ರ ಸುಖವಾಗಿ ಉಂಡು ತಿಂದು ಮೆರೆಯುವುದೇ?

**ಸಾವಿತ್ರಿ:**—ನಾವೂ ಉಪವಾಸಮಾಡಬೇಕೆನ್ನುವಿರಾ?

**ದಾಮಾಜಿ:**—ನಿಶ್ಚಯ. ನಮ್ಮ ಅಣ್ಣತಮ್ಮಂದಿರ ಮತ್ತು ಅಕ್ಕತಂಗಿಯರ ದುಃಖದಲ್ಲಿ ಭಾಗಿಗಳಾಗಬೇಕಾದುದು ನಮ್ಮ ಕರ್ತವ್ಯ. ನನ್ನ ಪ್ರತಿಜ್ಞೆಯನ್ನು ಕೇಳು!

### ಪದ ೧೭.

ರಾಗ: ಭೈರವ—ಝಂಪೆ
(ಸುರಪತಿಯ ಸೊಬಗ) ಎಂಬಂತೆ

ತೊರೆದೆನೀ ಕ್ಷಣದಿಂದಲಾರೋಗಣೆಯ ನಾನು |
ಧರಿಸಿರುವೆ ದೀಕ್ಷೆಯನು ಕೇಳು, ಕಾಂತೆ || ಪಲ್ಲ ||

ಬರಗಾಲದಿಂ ಬಳಲುತಿರುವ ಜನಕಾಹಾರ |
ದೊರೆವನಕ ನಾ ನಿರಾಹಾರಿಯಪ್ಪೆಂ || ೧ ||

ಈಗಳಿಂದಲೇ ಆಹಾರವನ್ನು ತೊರೆದೆನು! ತೊರೆದೆನು!! ದುರ್ಭಿಕ್ಷಪೀಡಿತರು ಅನ್ನಹೊಂದಿ ಸಂತುಷ್ಟರಾದನಂತರವೇ ಅದನ್ನು ಸ್ವೀಕರಿಸುವೆನು!

**ಸಾವಿತ್ರಿ:**—(ಸ್ವಗತಂ) ಆಹಾ! ಎಂತಹ ಭ್ರಾತೃಪ್ರೇಮ! ಎಂತಹ ಘೋರ ಪ್ರತಿಜ್ಞೆ!! (ಪ್ರಕಾಶಂ) ದೇವಾ, ದೇಶಬಾಂಧವರನ್ನು ಕುರಿತು ತಮಗಿರುವ ಪ್ರೇಮವು ಅನನ್ಯಾದೃಶವಾದುದೇ ಸರಿ. ಆದರೆ ಆಲೋಚಿಸಿ ನೋಡಿರಿ! ನಮ್ಮ ಉಪವಾಸವು ಉಪವಾಸದಿಂದಿರುವವರಿಗೆ ಅನ್ನವನ್ನು ಕೊಟ್ಟು ನೆರವಾಗಬಲ್ಲುದೇ? ಇದೋ, ನನ್ನ ಚಿನ್ನಾಭರಣಗಳನ್ನೆಲ್ಲ ತಮ್ಮವಶ ಕೊಡುತ್ತೇನೆ. ಇವುಗಳನ್ನು ವಿಕ್ರಯಿಸಿ ಬರುವ ಹಣದಿಂದ ಆಹಾರಪದಾರ್ಥಗಳನ್ನು ಪಡೆದು, ನಿರಾಶ್ರಿತರಿಗೆ ಹಂಚಿಕೊಡಿರಿ!

**ದಾಮಾಜಿ:**—ಸಾಧ್ವೀಮಣಿಗುಚಿತವಾದ ಮಾತು.

[ಸೇವಕನೊರ್ವನು ಪ್ರವೇಶಿಸುವನು.]

**ಸೇವಕ:**—ಮಹಾಸ್ವಾಮಿ, ಬರಗಾಲಕ್ಕೆ ಸಿಕ್ಕಿದ ಸುಮಾರು ನಾಲ್ಕು ಸಾವಿರ ಜನರು ಕಚೇರಿಯ ಹೊರಅಂಗಣದಲ್ಲಿ ಸೇರಿ ನಿಮ್ಮ ಹೆಸರನ್ನೆತ್ತಿ ಕೂಗುತ್ತಿರುವರು. ಹೊರಹೋಗಿರೆಂದು ಎಷ್ಟು ಹೇಳಿದರೂ ಕೇಳುವಂತಿಲ್ಲ.

**ದಾಮಾಜಿ:**—ಹಾಯ್, ಹಾಯ್! ಪಂಢರೀನಾಥಾ! ಜನತೆಯಮೇಲೆ

ಂತಹ ವಿಪತ್ತನ್ನು ತಂದೊಡ್ಡಿರುವೆ! ನೀನೆ ರಕ್ಷಿಸು, ರಕ್ಷಿಸು!! (ಸೇವಕನನ್ನು ಕುರಿತು) ವರೆಲ್ಲರೂ ಅಲ್ಲೇ ಇರಲಿ. ನಾನು ಜಾಗ್ರತೆಯಾಗಿ ಬರುವೆನೆಂದು ಅವ ಗೆ ತಿಳಿಸು.

**ಸೇವಕ:** — ಅಪ್ಪಣೆ. [ಹೋಗುವನು.]

**ದಾಮಾಜಿ:** — ಪ್ರಿಯೇ, ಕೇಳಿದೆಯಾ? ನಿನ್ನ ಈ ಕೆಲವು ಆಭರಣಗಳ ಾರಾಟದಿಂದ ಬರುವ ಉತ್ಪನ್ನವು ನಾಲ್ಕುಸಾವಿರ ಮಂದಿಗೆ ಆಹಾರವನ್ನೊದ ಸಬಲ್ಲುದೇ? ಇಲ್ಲ. (ಆಲೋಚಿಸಿ) ಸರಿ. ಒಂದು ಆಲೋಚನೆಯು ಹೊಳೆ ಯುವುದು.

**ಸಾವಿತ್ರಿ:** — ಅದೇನು?

**ದಾಮಾಜಿ:** — ಸರಕಾರಿ ಧಾನ್ಯಭಂಡಾರವೇ ನನ್ನ ವಶದಲ್ಲಿರುವುದ ವೆ? ಇಂತಹ ಕಠಿನಪ್ರಸಂಗದಲ್ಲಿ ಅದರೊಳಗಿನ ಧಾನ್ಯವನ್ನು ವ್ಯಯಮಾಡಿದರೆ ಸಮಂಜಸವಾಗದು.

**ಸಾವಿತ್ರಿ:** — ಪ್ರಾಣೇಶ್ವರಾ, ಪ್ರಾಜ್ಞರಾದ ತಾವು ಇಂತಹ ಅವಿಚಾರದ ಾತುಗಳನ್ನಾಡಬಹುದೇ? ರಾಜಕೀಯಧಾನ್ಯವನ್ನು ಬಾದಷಹರ ಒಪ್ಪಿಗೆ ಒಲ್ಲದೆ ವ್ಯಯಗೊಳಿಸುವ ಸ್ವಾತಂತ್ರ್ಯವು ತಮಗಿರುವುದೇ?

**ದಾಮಾಜಿ:** — ಬಾದಷಹರ ಸಮ್ಮತಿ — ಅನುಮತಿಗಳನ್ನು ಪಡೆಯಲು ಅವ ಾಶವಿರುವುದೆ? ಈಗಲೇ ಗತಪ್ರಾಣರಾಗಿರುವ ಜನರು ಇನ್ನೂ ವಿಳಂಬವಾದಿ ರೆ ಸತ್ತೇಹೋದಾರು. ದೇವಿ, ಇಲ್ಲದ ಸ್ವಾತಂತ್ರ್ಯವನ್ನು ಜನತಾರೂಪಿಯಾದ ನಾರ್ದನನ ಸೇವೆಗಾಗಿ ಪ್ರಕೃತ ಉಪಯೋಗಿಸಬೇಕಾಗಿದೆ.

**ಸಾವಿತ್ರಿ:** — ಬಾದಷಹರು ತೀರ ಕ್ರೋಧಸ್ವಭಾವದವರೆಂದು ಕೇಳಿ ಲ್ಲೆನು. ತಾವು ಮಾಡಲಿರುವ ಕೃತ್ಯವು ಅವರ ಕೋಪಕ್ಕೆ ಮಾರ್ಗವಾಗಿ ಮ್ಮ ಮೇಲೆ ಕಷ್ಟಪರಂಪರೆಯನ್ನು ತಂದೊಡ್ಡಬಹುದಲ್ಲವೇ?

## ಪದ ೧೮.

**ದಾಮಾಜಿ:** —

ರಾಗ: ಭೂಪ — ಝಂಪೆ

(ಬೇಡಿದರು ಸಿಗಲಾರದಿದ್ದರು) ಎಂಬಂತೆ

ಸಹಿಸಬಲ್ಲೆನು ಘೋರಕಷ್ಟವ ।
ದೇಶದುನ್ನತಿಗಾಗಿ ನಾ ॥ ಪಲ್ಲ ॥

ಸಹಿಸಬಲ್ಲೆನು ಮರಣದಂಡನೆ ।
ಜನರ ಹಿತಸಾಧನೆಗೆ ನಾ ॥ ಅ. ಪ. ॥

ಭ್ರಾತೃಭಗಿನಿಯರೆಲ್ಲ ದುಗುಡದಿ ।
ಬಳಲುತಿರಲದನೆಣಿಸದೆ ॥
ಸ್ವಾರ್ಥದಿಂ ಸಲೆ ಮೆರೆವವನು ಜೀ ।
ವನ್ಮೃತನು ತಾನಲ್ಲವೇ? ॥ ೧ ॥

ಬಾದಷಹರು ಕೋಪಿಸುವುದಾದರೆ ಕೋಪಿಸಲಿ! ಅವರ ಮುನಿಸು ನನ್ನೊಬ್ಬನನ್ನು ಕಷ್ಟಕ್ಕೆ ಸಿಲುಕಿಸಬಹುದು. ಆದರೆ ಅದು ಬಹುಸಂಖ್ಯಾಕಜನರನ್ನು ಬದುಕಿಸುವುದಲ್ಲವೇ? ಇದೇ ನನಗೆ ಸಂತೋಷ.

**ಸಾವಿತ್ರಿ:**—ತಮ್ಮ ಸ್ವಾರ್ಥತ್ಯಾಗವೂ ದೇಶಭಕ್ತಿಯೂ ಅಭಿನಂದನೀಯವೇ ಸರಿ. ತಮ್ಮ ಅಭಿಪ್ರಾಯವನ್ನು ನಾನು ಅನುಮೋದಿಸುವೆನು.

**ದಾಮಾಜಿ:**—ನಿನ್ನಂತಹ ವೀರಪತ್ನಿಯನ್ನುಳ್ಳ ನಾನು ಧನ್ಯನೇ ಸರಿ! ಈಗಲೇ ನಿರಾಶ್ರಿತರಿದ್ದೆಡೆಗೆ ಹೋಗುವೆನು. [ಹೋಗುವನು.]

[ಪರದೆ ಬೀಳುವುದು.]

## ದೃಶ್ಯ ೪.

[ಠಾಣೆದಾರನ ಕಚೇರಿ. ಮುಜುಮ್ದಾರ, ಜಮಾದಾರರಿರಲು ದಾಮಾಜಿಪಂತನು ಪ್ರವೇಶಿಸುವನು.]

**ದಾಮಾಜಿ:**—ಮುಜುಮ್ದಾರರೆ, ಕ್ಷಾಮಕ್ಕೀಡಾದ ಜನರ ಗೋಳು ಕೇಳಲಸಾಧ್ಯವಾಗಿದೆ. ಮೂರು ದಿನಗಳ ಉಪವಾಸದಿಂದ ತಳಮಳಿಸುತ್ತಿರುವ ಅವರ ದುರವಸ್ಥೆಯನ್ನು ಕಾಣುವಾಗ ಎದೆಗೆ ಶೂಲಹಾಕಿದಂತಾಗುವುದು. ಹೀಗಾದುದರಿಂದ ಕಂದಾಯ ವಸೂಲಿಯಿಂದ ನಮ್ಮ ವಶವಿರುವ ಸರಕಾರಿ ಧಾನ್ಯಕೋಶದೊಳಗಿನ ಧಾನ್ಯವನ್ನು ನಿರ್ಗತಿಕರಿಗೆ ಹಂಚಿಕೊಡಬೇಕೆಂದು ಸಂಕಲ್ಪಿಸಿರುವೆನು. ಈಗಿನ ಸಂದರ್ಭದಲ್ಲಿ ಬಾದಷಹರಿಗೆ ಮನವಿಯನ್ನು ಕಳುಹಿಸಿ ಅವರಿಂದ ಅನುಮತಿಯನ್ನು ಪಡೆದುಕೊಳ್ಳುವಷ್ಟು ಅವಕಾಶ ಕೂಡ ಇಲ್ಲವಷ್ಟೆ!

**ಮುಜು:**—ಹೌದು, ಸ್ವಾಮಿ, ಬಾದಷಹರ ಅನುಮತಿಯ ನಿರೀಕ್ಷಣೆಯಲ್ಲಿ ಧಾನ್ಯವನ್ನು ಹಂಚಿಕೊಟ್ಟು, ನಾವು ಕ್ಷಾಮಪೀಡಿತರನ್ನು ಬದುಕಿಸಬಹುದಲ್ಲದೆ ಬೇರೆ ಉಪಾಯವಿಲ್ಲ.

**ದಾಮಾಜಿ:**—ನಿಶ್ಚಯ. ನೀವು ಈಗಲೇ ಸುಲ್ತಾನ್ ಬಾದಷಹರಿಗೆ ಒಂದು ಓಲೆಯನ್ನು ಬರೆಯಬೇಕು. ಅದರಲ್ಲಿ ಬಾದಷಹರ ಅನುಮತಿಯ ನಿರೀಕ್ಷಣೆಯಲ್ಲಿ ದುರ್ಭಿಕ್ಷಪೀಡಿತರನ್ನು ಉಳಿಸಲು ಸರಕಾರಿ ಧಾನ್ಯವನ್ನು ಹಂಚಿ ಕೊಟ್ಟಿರುವುದನ್ನೂ, ಮಾಡಿದ ಕಾರ್ಯವನ್ನು ಮಂಜೂರುಮಾಡಬೇಕೆಂಬು ದನ್ನೂ ಬಿನ್ನವಿಸಬೇಕು.

**ಮುಜು:**—ಹಾಗೆಯೇ ಮಾಡುವೆನು.

**ದಾಮಾಜಿ:**—(ಜಮಾದಾರನನ್ನು ಕುರಿತು) ಜಮಾದಾರರೆ, ನೀವೀಗಲೇ ಧಾನ್ಯಕೋಶದ ಬಾಗಿಲನ್ನು ತೆರೆಯಬೇಕು. ಬರಗಾಲದವರಿಗೆ ಅಲ್ಲಿಗೆ ಬರ ಹೇಳುವೆನು. ನೀವು ಪ್ರತಿಯೊಂದು ವ್ಯಕ್ತಿಯ ಹೆಸರು, ವಿಳಾಸಗಳನ್ನೂ ಮನೆಯ ಜನಸಂಖ್ಯೆಯನ್ನೂ ವಿಚಾರಿಸಿ ಬರೆದು, ಒಂದು ಜನಕ್ಕೆ ಅರ್ಧ ಹೇರು ಭತ್ತ ಮತ್ತು ಕಾಲು ಹೇರು ಗೋಧಿ—ಈ ಪ್ರಕಾರ ಧಾನ್ಯಗಳನ್ನು ಕೊಡಬೇಕು. ಈ ಕೆಲಸದಲ್ಲಿ ನಾನು ಮತ್ತು ಮುಜುಮ್ದಾರರು ನಿಮಗೆ ಸಹಾ ಯಕರಾಗುವೆವು.

**ಜಮಾದಾರ:**—ಅಂತೆಯೇ ವರ್ತಿಸುವೆನು. [ಹೋಗುವನು.]

**ದಾಮಾಜಿ:**—(ತವಕಗೊಂಡು) ಮುಜುಮ್ದಾರರೆ, ಓಲೆಯು ಬರೆದು ಮುಗಿಸಿದನಂತರ ನೀವು ಧಾನ್ಯಕೋಶದೆಡೆಗೆ ಬನ್ನಿ. ನಾನು ಮುಂದಾಗಿ ಹೋಗುವೆನು.

**ಮುಜು:**—ಮಹದಾಜ್ಞೆ.

[ದಾಮಾಜಿಪಂತನು ಹೋಗುವನು.]

**ಮುಜು:**—(ಮಿಾಸೆತಿರುವಿ) ಕುರುಬನು ಅರಸನಾದನಂತೆ! ಎನ್ನಲು ನಾನು ಠಾಣೆದಾರನಾಗುವುದರಲ್ಲಿ ಅತಿಶಯವೇನು? ಸಾಧಿಸಿದರೆ ಸಬಳ ನುಂಗ ಬಹುದು ದಿಟ!

[ಫರದೆ ಬೀಳುವುದು.]

## ದೃಶ್ಯ ೫.

[ರಾಜಕೀಯಧಾನ್ಯಕೋಶ. ದಾಮಾಜಿಪಂತ, ಮುಜುಮ್ದಾರ, ಜಮಾದಾರರು ದ್ವಾರದಲ್ಲಿ ನಿಂತಿರುವರು. ಬರಗಾಲದ ಜನರು ತಂಡತಂಡಗಳಾಗಿ ಪ್ರವೇಶಿಸುವರು.]

**ದಾಮಾಜಿ:**—ಎಲ್ಲರೂ ವಿಶ್ರಮಿಸಿರಿ.

**ಎಲ್ಲರೂ:**—ಹಾಗೆಯೇ ಆಗಲಿ. [ಎಲ್ಲರೂ ಕುಳಿತುಕೊಳ್ಳುವರು.]

**ದಾಮಾಜಿ:**—ಅಣ್ಣತಮ್ಮಂದಿರೇ ಮತ್ತು ಅಕ್ಕತಂಗಿಯರೇ, ಕ್ಷಾಮದಿಂದ ಬಳಲುವ ನಿಮಗೆ ಸುಮಾರು ಮೂರು ತಿಂಗಳಿಗೆ ಸಾಕಾಗುವಷ್ಟು ಆಹಾರಪದಾರ್ಥಗಳನ್ನು ಎಂದರೆ ಭತ್ತವನ್ನೂ ಗೋಧಿಯನ್ನೂ ಕೊಡಬೇಕೆಂದು ನಿರ್ಧರಿಸಿರುವೆವು. ಅದುಕಾರಣ ಪ್ರತಿಯೊಬ್ಬನು ಅಥವಾ ಒಬ್ಬಳು ತನ್ನ ಮನೆಯ ಜನಸಂಖ್ಯೆಯನ್ನು ಜಮಾದಾರರಿಗೆ ತಿಳಿಸಿ, ಧಾನ್ಯಗಳನ್ನು ಪಡೆಯಬೇಕಾಗಿ ಅಪೇಕ್ಷಿಸುತ್ತೇನೆ.

**ಜೋಶಿ:**—ಮಹಾತ್ಮರೆ, ಹಾಗೆಯೇ ಮಾಡುವೆವು. ನಿಮ್ಮುಪಕಾರವು ಎಂದೆಂದೂ ಮರೆಯತಕ್ಕುದಲ್ಲ.

**ದಾಮಾಜಿ:**— ಒಬ್ಬೊಬ್ಬರೇ ಒಳಕ್ಕೆ ಹೋಗಿರಿ.

[ಕ್ಷಾಮಪೀಡಿತರು ಒಬ್ಬೊಬ್ಬರಾಗಿ ಧಾನ್ಯಕೋಶದೊಳಕ್ಕೆ ಹೋಗಿ, ಧಾನ್ಯಗಳನ್ನು ಪಡೆದುಕೊಂಡು ಹೋಗುವರು.]

[ಫರದೆ ಬೀಳುವುದು.]

## ದೃಶ್ಯ ೬.

[ರಾಜವೀಥಿಯಲ್ಲಿ ಮುಜುಮ್ದಾರನೂ ಶಂಕ್ರುವೂ ಪ್ರವೇಶಿಸುವರು.]

**ಮುಜು:**—ಶಂಕ್ರೂ, ನಾವಿರ್ವರೂ ಭಾಗ್ಯಶಾಲಿಗಳು. ನಮ್ಮ ನಿರೀಕ್ಷಣೆಯಂತೆ ಎಲ್ಲವೂ ಸರಿಬಂತು.

**ಶಂಕ್ರು:**—ಇನ್ನು ಸ್ವಲ್ಪವೇ ಉಳಿದಿರುವುದು.

**ಮುಜು:**—ಅದನ್ನೂ ಪೂರೈಸುತ್ತೇನೆ. ತದನಂತರ ಎಲ್ಲಾ ವಿಷಯಗಳನ್ನು ಸುಖವಾಗಿ ಮಾತನಾಡೋಣ.

**ಶಂಕ್ರು:**—ನೀವು ಠಾಣೆದಾರರಾದನಂತರ ಈ ಭೃತ್ಯನನ್ನು ಮರೆಯಲಾಗದು!

**ಮುಜು:**—ನಿನ್ನ ವಿಷಯದಲ್ಲಿ ಮರವೆಯೇ? ಎಂದೆಂದಿಗೂ ನೀನು ನನ್ನ ಆಪ್ತನಾಗಿಯೇ ಇರುವೆಯಂತೆ!

**ಶಂಕ್ರು:**—ನಾನು ಧನ್ಯನಾದೆ!

**ಮುಜು:**—ಶಂಕ್ರೂ, ಬಾದಷಹರನ್ನು ಕಂಡು ಮಾತನಾಡಲು ನಾನೀಗಲೇ ಬೇದರಕ್ಕೆ ಹೊರಡಬೇಕಾಗಿದೆ. ನೀನು ಈಗಲೇ ಮನೆಗೆ ನಡೆದು, ನಡೆದ ವೃತ್ತಾಂತವನ್ನು ನಮ್ಮಾಕೆಗೆ ತಿಳಿಸು.

**ಶಂಕ್ರು:**—ಅಪ್ಪಣೆಪ್ರಕಾರ. [ಹೋಗುವನು.]

**ಮುಜು:**—(ತೆರೆಯ ಕಡೆ ನೋಡಿ) ಕ್ಷಾಮಪೀಡಿತರ ತಂಡವೊಂದು ಇತ್ತ

ಬರುವಂತಿದೆ. ಇಲ್ಲೆ ಮರೆಯಲ್ಲಿದ್ದು ಇವರ ಮಾತುಕತೆಗಳನ್ನು ಕೇಳಿ, ಸ್ವಲ್ಪ ವಿನೋದಿಸೋಣ. [ಮರೆಯಾಗುವನು.]

[ಧಾನ್ಯದ ಚೀಲಗಳನ್ನು ಹೊತ್ತ ಬರಗಾಲದವರು ಪ್ರವೇಶಿಸುವರು.]

**ರಾಮದಾಸ:**—ಜೋಶಿಯವರೇ, ದಾಮಾಜಿಪಂತರ ಭ್ರಾತೃಪ್ರೇಮವೂ ಸ್ವಾರ್ಥತ್ಯಾಗವೂ ಅಪ್ರತಿಮವಾದುದಲ್ಲವೆ?

**ಜೋಶಿ:**—ಸಂದೇಹವೇನು? ನಮ್ಮೆಲ್ಲರ ಪ್ರಾಣರಕ್ಷಣೆಗಾಗಿ ಧಾನ್ಯಸಂಚಯವನ್ನೇ ರಿಕ್ತಗೊಳಿಸಿದರು.

**ಮುಜು:**—(ಸ್ವಗತಂ) ದಾಮಾಜಿಯವರ ಗುಣಕಥನವನ್ನು ಮಾಡಲು ಇವರು ಜಾಣರೇ ಸರಿ.

**ಮತ್ತೊಬ್ಬ:**—ದಾಮಾಜಿಪಂತರ ಔದಾರ್ಯವನ್ನೂ ತ್ಯಾಗಗುಣವನ್ನೂ ಹೊಗಳಲು ನನ್ನ ನಾಲಗೆಗೆ ಶಕ್ತಿ ಸಾಲದು.

**ಮುಜು:**—(ನಕ್ಕು) ದಾಮಾಜಿಯವರ ಔದಾರ್ಯವನ್ನೂ ತ್ಯಾಗಗುಣವನ್ನೂ ಹೊಗಳಲು ನಾಲಗೆಗೆ ಶಕ್ತಿ ಸಾಲದಂತೆ! ಏನು ಚಮತ್ಕಾರ! ಎರಡನೆಯವನ ದ್ರವ್ಯವನ್ನು ಮೂರನೆಯವನಿಗೆ ದಾನಮಾಡುವುದೂ ಔದಾರ್ಯವೆಂದಾದರೆ ಈ ಲೋಕದಲ್ಲಿ ಎಲ್ಲರೂ ಉದಾರಿಗಳೇ ಆಗಬಹುದಲ್ಲ!

**ಮಗದೊಬ್ಬ:**—ಹೆಂಡರುಮಕ್ಕಳು ಉಪವಾಸದಿಂದ ಎಷ್ಟು ಬೊಬ್ಬಿಡುವರೋ! ನಡೆಯಿರಿ! ತೀವ್ರ ಹೋಗೋಣ. [ಎಲ್ಲರೂ ಹೋಗುವರು.]

[ಮುಜುಮ್ದಾರನು ತೆರೆಯಿಂದ ಹೊರಬರುವನು.]

**ಮುಜು:**—(ಸಂತೋಷದಿಂದ ಹಿಗ್ಗಿ) ನಾನು ಮಾಡಿದ ವಿದ್ಯೆಯನ್ನೆಣಿಸಿದರೆ ನನಗೇ ಆಶ್ಚರ್ಯವಾಗುತ್ತಿದೆ. ಈಗಲೇ ಬೇದರಕ್ಕೆ ಹೋಗಿ, ಬಾದಷಹರನ್ನು ಕಂಡು, ದಾಮಾಜಿಯವರು ಧಾನ್ಯಸಂಗ್ರಹವನ್ನು ಬರಿದುಮಾಡಿರುವ ವಿಷಯವನ್ನು ತಿಳಿಸುವೆನು. ಸುಲ್ತಾನರನ್ನು ಕೆಣಕಿಸುವೆನು. ಮುಂಗೋಪಿಯಾದ ಸಮ್ರಾಟರು ದಾಮಾಜಿಯವರಿಗೆ ಕಠಿನಶಿಕ್ಷೆಯನ್ನೇ ವಿಧಿಸುವರು. ಠಾಣೆದಾರರ ಅವನತಿಯೇ ಈ ಮುಜುಮ್ದಾರನ ಉನ್ನತಿಗೆ ಸಾಧಕವಾಗುವುದು. (ಮೀಸೆತಿರುವಿ) ಕುರುಬನು ಅರಸನಾದನಂತೆ! ಬಡವರ ಹುಡುಗಿಯು ರಾಣಿಯಾದಳಂತೆ!! ಸಾಧಿಸಿದರೆ ಸಬಳ ನುಂಗಬಹುದು!!! [ಅಬ್ಬರದಿಂದ ಹೋಗುವನು.]

[ಅಂಕದ ಫರದೆ ಬೀಳುವುದು.]

— ಇಂತಿದು ತೃತೀಯಾಂಕಂ —

# ನಾಲ್ಕನೆಯ ಅಂಕ

## ದೃಶ್ಯ ೧.

[ಸ್ಥಳ: ಬೀದರ. ರಾಜದರ್ಬಾರ್. ಸುಲ್ತಾನ್ ಬಾದಷಹ, ಮಂತ್ರಿ, ಸೇನಾಪತಿ, ವಿದೂಷಕ — ಇತ್ಯಾದಿಯವರು ಮಂಡಿಸಿರುವರು. ಸ್ತುತಿಪಾಠಕರು ಹಾಡುವರು.]

### ಪದ ೧೯.

ರಾಗ: ಮಾಂಡ್‌ಮಿಶ್ರ — ಗಜಲ್

ವಿಜಯಿಸೈ — ವೀರ ರಣಧೀರಾ । ಗಂಭೀರಾ ।
ವೈರಿಸಂಹಾರಾ ॥
ಉದಾರಾ । ಸಾರಗುಣಸಾರಾ । ಧರೇಶಾ ।
ಸಾರ್ವಭೌಮವರಾ ॥ ೧ ॥

ರಾಜರಾಜೇಶ್ವರ, ಉದ್ದಂಡಪರಾಕ್ರಮಿ, ಬೀದರಪುರವರಾಧೀಶ್ವರ — ಸುಲ್ತಾನ್ ಬಾದಷಹ, ಪರಾಕು!

**ಸುಲ್ತಾನ್:**— ಸ್ತುತಿಪಾಠಕರೇ, ನಿಮ್ಮ ಸ್ತುತಿಯಿಂದ ಮಹದಾನಂದವಾಯಿತು.

**ವಿದೂಷಕ:**— (ಸ್ವಗತಂ) ಈ ಮರುಳು ಅರಸನಿಗೆ ಮುಖಸ್ತುತಿಮಾಡಿದರಾಯಿತು. ಧಾರಾಳವಾಗಿ ಸಂಭಾವನೆಮಾಡುವನು. ಹೀಗಾದುದರಿಂದಲ್ಲವೇ ಈ ವಿದೂಷಕನ ಹೊಟ್ಟೆಗೆ ನಿರಂತರವೂ ಏನೂ ಕಡಮೆಯಿಲ್ಲ. (ಪ್ರಕಾಶಂ) ಸುಲ್ತಾನ್ ಸಾಹೇಬ್, ಇವರು ನಿನ್ನ ಸ್ತುತಿಯನ್ನು ಏನು ಕೊಂಡಾಡಬಲ್ಲರು! ನಿನ್ನ ಭಾಗ್ಯವಿಶೇಷವನ್ನು ಬಣ್ಣಿಸಲು ಮಹಾಕವಿಗಳಿಗೂ ಸುಲಭದಲ್ಲಿ ಸಾಧ್ಯವಾಗದು.

**ಸುಲ್ತಾನ್:**— ಭಲಾ! ವಿನೋದಾ, ಸತ್ಯವನ್ನು ಮರೆಮಾಜದೆ ಹೇಳಿರುವೆ.

**ವಿದೂಷಕ:**— (ನಕ್ಕು ಸ್ವಗತಂ) ನಾನು ಏನು ಹೇಳಿದರೂ ಇವನಿಗೆ ಸತ್ಯವೆಂದೇ ಭಾಸವಾಗುವುದು. (ಗಹಗಹಿಸಿ ನಗುವನು.)

[ನರ್ತಕಿಯರು ಬಂದು ನಾಟ್ಯವಾಡುವರು.]

**ಸುಲ್ತಾನ್:**— ಭಲೇ, ನಾಟ್ಯಕಲಾನಿಪುಣೆಯರೇ, ಪಾರಿತೋಷಿಕವಾಗಿ ನನ್ನೀ ಪೀತಾಂಬರವನ್ನು ತೆಗೆದುಕೊಳ್ಳಿರಿ! [ತನ್ನ ಪೀತಾಂಬರವನ್ನು ಒರ್ವ ನರ್ತಕಿಯ ಕೈಗೆ ಕೊಡುವನು.]

**ವಿದೂಷಕ:**—ನನ್ನೀ ಅಂಬರಪೀತವನ್ನೂ ಸ್ವೀಕರಿಸಿರಿ. [ತನ್ನ ಹರಕು ಕಂಬಳಿಯನ್ನು ಕೈಗಳನ್ನು ಮುಂದೆ ಮಾಡಿ ಒರ್ವ ನರ್ತಕಿಗೆ ತೋರಿಸುವನು.]

**ಸುಲ್ತಾನ್:**—ಮಿತ್ರನೇ, ನಾಟ್ಯವು ಮನೋಹರವಾಗಿತ್ತಲ್ಲವೇ?

**ವಿದೂಷಕ:**—ಅದರಲ್ಲೇನು ಸಂದೇಹ? (ಸ್ವಗತಂ) ಈತನಿಗೆ ಎಲ್ಲವೂ ಸರಸವೇ. ಆದರೆ ನನಗಾದರೊ ಲಾಡು, ಹಲ್ವಾ, ಚಿರೋಟಿ ಇತ್ಯಾದಿ ಭೋಜ್ಯ ಪದಾರ್ಥಗಳನ್ನು ಬಿಟ್ಟರೆ ಮತ್ತೆಲ್ಲವೂ ವಿರಸವೇ.

**ಸುಲ್ತಾನ್:**—ಮಿತ್ರಾ, ನಿನಗೆ ಗಾನದಲ್ಲಿ ಪರಿಶ್ರಮವಿರುವುದೇ?

**ವಿದೂಷಕ:**—ತುಂಬಾ . . . . . ಶ್ರಮವಿದೆ. ಎಳೆಯವನಾಗಿದ್ದಾಗ ಸಂಗೀತದಲ್ಲಿ ನಾನು ಮಹಾಪ್ರವೀಣನಾಗಿದ್ದೆ. ನನ್ನ ಗಾನಕ್ಕೆ ಮರುಳಾಗಿ ಎಷ್ಟೋ ಮಂದಿ ಸ್ತ್ರೀಪುರುಷರು ನನ್ನ ಕಾಲ ಬಳಿ ಬಂದು ಅಮೂಲ್ಯವಾದ ಪಾರಿತೋಷಿಕಗಳನ್ನು ಕೊಟ್ಟು ಮನ್ನಿಸುತ್ತಿದ್ದರು. ಗೊತ್ತಾಯಿತೆ?

**ಸುಲ್ತಾನ್:**—ಹಾಗಾದರೆ ನನ್ನ ವಿನೋದಾರ್ಥವಾಗಿ ಒಂದು ರಾಗವನ್ನು ಆಲಾಪಿಸು. ನೋಡೋಣ!

**ವಿದೂಷಕ:**—ರಾಗ ನೋಡಲಿಕ್ಕಾಗುವುದೆ? ಅದು ಕೇಳಲಿಕ್ಕೆ ಮಾತ್ರ ಸಾಧ್ಯ. ರಾಗವನ್ನು ಎಳೆಯುವುದೆಂದರೆ ಸುಲಭದ ಕೆಲಸವಲ್ಲ. (ತನ್ನ ಒಡಲನ್ನು ದೃಷ್ಟಿಸಿ) ಈ ಹಾಳುಹೊಟ್ಟೆ ಗಟ್ಟಿಯಾಗಿದ್ದರೆ ಮಾತ್ರ ರಾಗವು ತಾನಾಗಿಯೇ ಹೊರಬೀಳುವುದು. ಇರಲಿ. ನಿನ್ನ ಸಂತೋಷಕ್ಕಾಗಿ ಒಂದು ರಾಗದ ಆಲಾಪನೆ ಮಾಡುತ್ತೇನೆ.

[ವಿಕಾರಧ್ವನಿಯಿಂದ ರಾಗವನ್ನಾಲಾಪಿಸುವನು.]

**ಸುಲ್ತಾನ್:**—ವಿನೋದಾ, ಸಾಕು. ಈ ರಾಗದ ಹೆಸರೇನು?

**ವಿದೂಷಕ:**—(ಬೇಸರುನಟಿಸಿ) ಹಾಡುವ ತನ್ಮಧ್ಯೆ ಮಾತಾಡಿದರೆ ರಾಗವು ಕೆಟ್ಟುಹೋಗುವುದು. ಇರಲಿ. ಈ ರಾಗದ ಹೆಸರು—ಗಾರ್ದಭರಾಗ. ತಾಳ—ಕೈಯಿಂದ ಹೊಡೆಯುವ ಕಾರಣ ಕೈತಾಳ.

[ತಿರುಗಿ ಅಪಸ್ವರದಿಂದ ಹಾಡತೊಡಗುವನು. ತೆರೆಯೊಳಗಿಂದ ನರಿಯ ಕೂಗಿನಂತಹ ವಿಕಾರಧ್ವನಿಯಾಗುವುದು.]

**ವಿದೂಷಕ:**—(ಕೋಪಗೊಂಡು) ಛೆ! ಅದಾರು? ನನಗೆ ಪರಿಹಾಸ್ಯಮಾಡುತ್ತಿರುವರು?

**ಸುಲ್ತಾನ್:**—ನಿನ್ನ ರಾಗವೇ ಅಂತಹುದು. ನೀನು ಹಾಡಿದ್ದೇ ರಾಗ.

**ವಿದೂಷಕ:**—ನನ್ನಂತಹ ಗಾನವಿದ್ಯಾವಿಶಾರದರ ಲಕ್ಷಣವೇ ಹಾಗೆ.

**ಸುಲ್ತಾನ್:**—ಆದರೆ ನನಗೆ ಮಾತ್ರ ನಿನ್ನ ರಾಗವು ಇಂಪಾಗಿ ಕೇಳಿ ಸಲಿಲ್ಲ.

**ವಿದೂಷಕ:**—ವದನಕಮಲವು ಸೊಂಪಾಗಿದ್ದರೆ ಮಾತ್ರ ರಾಗವು ಇಂಪಾಗಿ ಪರಿಣಮಿಸುವುದು.

[ತೆರೆಯೊಳಗಿಂದ]

"ಸುಲ್ತಾನ್ ಬಾದಷಹರಿಗೆ ಜಯವಾಗಲಿ."

**ಸುಲ್ತಾನ್:**—ಸಮಾಚಾರವೇನು?

[ತೆರೆಯೊಳಗಿಂದ]

"ಮಂಗಳವೇಢೆಯಿಂದ ಮುಜುಮ್ದಾರರು ಏನೋ ಅತ್ಯಗತ್ಯಕಾರ್ಯದಲ್ಲಿ ಬಂದಿರುವರು."

**ಸುಲ್ತಾನ್:**—ಅವರನ್ನು ಇಲ್ಲಿಗೆ ಬರಮಾಡು.

[ಮುಜುಮ್ದಾರನು ಪ್ರವೇಶಿಸುವನು.]

**ಸುಲ್ತಾನ್:**—ಮುಜುಮ್ದಾರರೆ, ನೀವು ಬಂದ ಅತ್ಯಗತ್ಯಕಾರ್ಯ ಯಾವುದು? (ದಿಟ್ಟಿಸಿ ನೋಡಿ) ನಿಮ್ಮ ದೇಹವು ಕಂಪಿಸುತ್ತಿರಲು ಕಾರಣವೇನು?

**ಮುಜು:**—(ಗಾಬರಿನಟಿಸಿ) ಪ್ರಭೋ, ಏನೆಂದು ಹೇಳಲಿ?

**ಸುಲ್ತಾನ್:**—ಏನು ಪ್ರಮಾದವಾಯಿತು? ತೀವ್ರ ಹೇಳಿರಿ.

**ಮುಜು:**—ಪ್ರಭೋ! ರಾಹುಗ್ರಹಣ ಹಿಡಿದ ಚಂದ್ರನಂತೆ ಮಂಗಳ ವೇಢೆಯ ಅವಸ್ಥೆಯಾಗಿದೆ.

**ಸುಲ್ತಾನ್:**—ಮುಜುಮ್ದಾರ್, ಅಲ್ಲದಸಲ್ಲದ ಮಾತುಗಳನ್ನಾಡಬೇಡಿರಿ. ವಿಷಯವನ್ನು ಸ್ಪಷ್ಟವಾಗಿ ಹೇಳಿರಿ.

**ವಿದೂಷಕ:**—(ಸ್ವಗತಂ) ನನ್ನಂತಹ ಬ್ರಾಹ್ಮಣೋತ್ತಮನು ಪ್ರತ್ಯಕ್ಷ ಇಲ್ಲಿ ಇರುತಿರಲು ಈ ಹಾಳುಗೂಬೆ ನಿರರ್ಥಕವಾದ ಮಾತುಗಳನ್ನಾಡುವುದೆಂದರೇನು? (ಪ್ರಕಾಶಂ) ಮುಜುಮ್ದಾರರೆ, ಇದು ರಾಜಸಭೆಯೆಂಬುದು ನೆನಪಿನಲ್ಲಿರಲಿ!

**ಮುಜು:**—ಪ್ರಭೋ, ಕ್ಷಮಿಸಬೇಕು. ಸೇವಕವೃತ್ತಿಯವನು ತನ್ನ ಸ್ವಾಮಿಯನ್ನು ಅಲಕ್ಷಿಸಿ ಅಧಿಕಾರವನ್ನು ತೋರಿಸುವುದಾದರೆ ರಾಜ್ಯವು ಸುಭಿಕ್ಷ ವಾಗಿರುವುದು ಹೇಗೆ?

**ಸುಲ್ತಾನ್:**—(ಆಶ್ಚರ್ಯಗೊಂಡು) ಏನು? ಭೃತ್ಯನು ಪ್ರಭುವಿಗಿಂತ ಹೆಚ್ಚಿನ ಅಧಿಕಾರವನ್ನು ತೋರುವುದೇ? ಅಂತಹ ಅಕೃತ್ಯವು ನನ್ನ ರಾಜ್ಯದಲ್ಲಿ ನಡೆಯು ತ್ತಿರುವುದೇ?

**ಮುಜು:**— ಅಹುದು. ತಮ್ಮ ರಾಜ್ಯದಲ್ಲೇ.

**ವಿದೂಷಕ:**— (ಸ್ವಗತಂ) ಈತನು ಬಹಳ ಚಮತ್ಕಾರವಾಗಿ ಮಾತಾಡ ಬಲ್ಲನು. ಆದರೆ ಚಮತ್ಕಾರವೊಂದೇ ಅಲ್ಲ. ಚಮತ್ಕಾರದೊಂದಿಗೆ ಇವನಿಗೆ ಸಹಜವಾದ ಕಪಟವೂ ಸೇರಿರಬಹುದೆ?

**ಸುಲ್ತಾನ್:**— ನನ್ನ ರಾಜ್ಯದಲ್ಲಿ ಸ್ವಾಮಿದ್ರೋಹಿಯಾದ ಭೃತ್ಯನಿರುವನೆ? ಅವನಾರು?

**ಮುಜು:**— ಪ್ರಭೋ, ಠಾಣೆದಾರ ದಾಮಾಜಿಪಂತರು ಸರಕಾರಿ ಧಾನ್ಯಕೋಶವನ್ನು ಬರಿದುಮಾಡಿರುವರು. ತಮ್ಮ ಅಪ್ಪಣೆಯಿಲ್ಲದೆ ಹಾಗೆ ಧಾನ್ಯವನ್ನು ದುರ್ವ್ಯಯಗೊಳಿಸುವುದು ತಪ್ಪಾಗುವುದೆಂದೂ ಅಂತಹ ಅಕೃತ್ಯ ದಿಂದ ಮರಣದಂಡನೆಯು ಗತಿಯಾಗಬಹುದೆಂದೂ ನಾನು ಅವರಿಗೆ ಒತ್ತಿ ಒತ್ತಿ ಹೇಳಿದರೂ ನನ್ನ ಮಾತನ್ನು ಅವರು ಲಕ್ಷಿಸಲಿಲ್ಲ.

**ಸುಲ್ತಾನ್:**— ಏನು ದಾಮಾಜಿಯು ಧಾನ್ಯಕೋಶವನ್ನು ರಿಕ್ತಗೊಳಿಸಿ ದನೇ? — ಇದು ನಿಜವೇ?

**ಮುಜು:**— ಅಹುದು. ದಾಮಾಜಿಯುವರೇ ಧಾನ್ಯಭಂಡಾರವನ್ನು ಸೂರೆ ಮಾಡಿರುವರು.

**ಸುಲ್ತಾನ್:**-- ಏನು? ಈ ಸುಲ್ತಾನ್ ಬಾದಷಹನ ಭಯದಿಂದ ಮೂರು ಲೋಕವೂ ನಡುಗುತ್ತಿರುವಲ್ಲಿ ಈ ಹಾಳು ಠಾಣೆದಾರನು ಅಪವಾದವಾದನೇ? ಯಾರ ಸೊತ್ತನ್ನು ಯಾರಿಗೆ ದಾನಮಾಡಿದನು? ಸ್ವೇಚ್ಛಾಪ್ರವರ್ತನೆಗೆ ಕೈ ಯಿಕ್ಕಲು ಅವನಾರು?-- ನನ್ನ ಪರಿಚಾರಕನು, ಸೇವಕನು, ಭೃತ್ಯನು. ನನ್ನ ಧಾನ್ಯಮುಟ್ಟುವ ಸ್ವಾತಂತ್ರ್ಯವಾದರೂ ಅವನಿಗೆಲ್ಲಿ? ನಾನು ಅವನ ವಿಷಯದಲ್ಲಿ ತೋರಿದ ಹೆಚ್ಚಿನ ಸಲಿಗೆಯ ಪ್ರತೀಕಾರವನ್ನು ಚೆನ್ನಾಗಿ ಮಾಡಿದನಲ್ಲವೆ! ದಾಮಾಜಿ!

### ಪದ ೨೦.

ರಾಗ: ಹಿಂದೋಳ — ತ್ರಿವಟ

(ನಿಲ್ಲೈ ದುರುಳನೆ ಛೀ) ಎಂಬಂತೆ

ಛೀ ಛೀ, ಧೂರ್ತನೆ, ಛೀ ।
ಹಾ ಮೋಸಗೈದೆ ಎನ್ನಯಾ ।
ರಾಶಿರಾಶಿಯಾ ಧಾನ್ಯಹಂಚಿ ನೀ ॥ ಪ ॥

ಪುಂಡನೆ, ನೀ ನೆರೆದುಂಡು ಗರ್ವದಿಂ ।
ಖಂಡಿಖಂಡಿಯಿಂದಿರ್ಪ ಧಾನ್ಯದಾ ॥
ಭಂಡಾರವನೇ ಸೂರೆಗೈದೆ, ಥೂ ।
ಭಂಡನೆ, ತವ ಮದ ಖಂಡಿತದಿಳಿಸುವೆ ॥ ೧ ॥

(ಕೋಪದಿಂದ ಹಲ್ಲು ಕಡಿಯುವನು.)

**ಮಂತ್ರಿ:**—ಪ್ರಭೋ, ಶಾಂತರಾಗಿರಿ. ನ್ಯಾಯಾನ್ಯಾಯಗಳನ್ನು ವಿಮರ್ಶಿಸಬೇಕಾದುದು ರಾಜನೀತಿಯಲ್ಲವೆ?

**ಸುಲ್ತಾನ್:**—ನ್ಯಾಯಾನ್ಯಾಯಗಳನ್ನು ವಿಮರ್ಶಿಸುವುದೇನು? ನನ್ನ ಸೇವಕನು ನನ್ನಾಜ್ಞೆಯಿಲ್ಲದೆ ನನ್ನ ಸೊತ್ತನ್ನಪಹರಿಸಿ, ನಿರಪರಾಧಿಯಾಗಬಲ್ಲನೇ? ಆಶ್ರಯವೀಯುವ ವೃಕ್ಷವನ್ನು ಕಿತ್ತು ಹಾಕಲೆಳಸುವ ಕೃತಘ್ನನೂ ನಿರ್ದೋಷಿಯೇ? ನನ್ನ ಅಪಾರದ್ರವ್ಯವನ್ನು ದುರ್ವ್ಯಯಗೊಳಿಸಿ ನನ್ನನ್ನು ಜೀವನ್ಮೃತನನ್ನಾಗಿ ಮಾಡಿದ ಆ ದ್ರೋಹಿಯನ್ನು ಸಜೀವ ಬಿಟ್ಟರೆ ಈ ಸುಲ್ತಾನ್ ಸಮ್ರಾಟನ ಅಖಂಡಗೌರವವೂ ದಿಗಂತವ್ಯಾಪಿಕೀರ್ತಿಯೂ ತನ್ನಿಂದಲೇ ನಾಶ ಹೊಂದುವುದರಲ್ಲಿ ಏನೂ ಸಂದೇಹವಿಲ್ಲ.

॥ ಕಂದ ॥

ಘಡ ಘಡ ಎನ್ನನುಮತಿಯಂ ।
ಪಡೆಯದೆ ಆ ದುಷ್ಟನೆನ್ನ ಧಾನ್ಯನಿಚಯುವಂ ॥
ಕೆಡಿಪುದೆ? ಬಿಡುವೆನೆ ನಾನಾ ।
ಕೆಡುಕನ ತಲೆಹೊಯ್ಸಿ ಕೊಲ್ಲುವುದಲ್ಲದೆ ಮಾಣೆಂ ॥

ಆ ವಿಶ್ವಾಸಘಾತಕಿಗೆ—ಪಾತಕಿಗೆ—ರಾಜದ್ರೋಹಿಗೆ ಮರಣದಂಡನೆಯೇ ತಕ್ಕ ಪ್ರಾಯಶ್ಚಿತ್ತ.

**ಮಂತ್ರಿ:**—ಪ್ರಭೋ, ಸದಸದ್ವಿವೇಚನೆಯಿಲ್ಲದೆ ಯಾವ ಕಾರ್ಯಕ್ಕೂ ಪ್ರವರ್ತಿಸುವುದು ನೀತಿಜ್ಞರಿಗೆ ವಿಹಿತವಲ್ಲ. ಠಾಣೆದಾರರಿಗೆ ಧಾನ್ಯವನ್ನು ವಿಕ್ರಯಿಸುವ ಅಧಿಕಾರವು ಇರುವುದಷ್ಟೆ! ಹೀಗಿರಲು ಸಮಸ್ತಧಾನ್ಯದ ಕ್ರಯವನ್ನು ದಾಮಾಜಿಯವರು ಕೊಡುವುದಾದರೆ ಅವರಮೇಲೆ ಅಪರಾಧವನ್ನು ಹೊರಿಸಲು ಸಾಧ್ಯವಿಲ್ಲವಲ್ಲ!

**ಸುಲ್ತಾನ್:**—ಆಗರ್ಭದರಿದ್ರನಾದ ಆತನಿಗೆ ನನ್ನ ನಿಖಿಲಧಾನ್ಯದ ಮೌಲ್ಯವನ್ನು ಸಲ್ಲಿಸುವ ಯೋಗ್ಯತೆ ಎಲ್ಲಿ?

**ಮಂತ್ರಿ:**— ಒಂದು ವೇಳೆ ಅವರು ಕೊಡುವುದಾದರೆ . . . . . . .

**ಸುಲ್ತಾನ್:**— ಒಂದು ವೇಳೆ ಅಲ್ಲ. ಹತ್ತು ವೇಳೆಗೂ ಆ ಗತಿಗೇಡಿಯು ಕೊಡಲಾರನು. (ಮುಜುಮ್ದಾರನನ್ನು ಕುರಿತು) ಮುಜುಮ್ದಾರ್, ಧಾನ್ಯಕೋಶದೊಳಗಿನ ಧಾನ್ಯವೆಷ್ಟು? ಮತ್ತು ಅದರ ಕ್ರಯವೆಷ್ಟು?

**ಮುಜುಮ್ದಾರ್:**— ಪ್ರಭೋ! ಏಳ್ನೂರು ಖಂಡುಗ ಧಾನ್ಯ. ಒಟ್ಟಾರೆ ಅದರ ಮೌಲ್ಯ ಒಂದುಲಕ್ಷದ ಅರುವತ್ತೆಂಟುಸಾವಿರ ರೂಪಾಯಿ.

**ಸುಲ್ತಾನ್:**— ಒಂದುಲಕ್ಷ ಅರುವತ್ತೆಂಟುಸಾವಿರ ರೂಪಾಯಿಯೇ! ಹಾಯ್! ಹಾಯ್! ನನ್ನ ಹಣವೇ! ಎರಡನೆಯವನಿಂದ ದುರ್ವ್ಯಯವಾಗುವ ಬದಲಾಗಿ ನನ್ನ ಕೈಯಿಂದಲೇ ನಷ್ಟವಾಗುತ್ತಿದ್ದರೆ ನಾನು ಈ ಪರಿ ಶೋಕಿಸುತ್ತಿದ್ದೆನೇ? (ತೆರೆಯ ಕಡೆ ನೋಡಿ) ಯಾರಲ್ಲಿ?

**ಚಾರ:**— (ಪ್ರವೇಶಿಸಿ) ಏನಪ್ಪಣೆ?

**ಸುಲ್ತಾನ್:**— ತೀವ್ರ ಇಬ್ಬರು ರಾಜಭಟರನ್ನು ಬರಮಾಡು.

**ಚಾರ:**— ಅಪ್ಪಣೆ. [ಹೋಗುವನು.]

[ಇಬ್ಬರು ರಾಜಭಟರು ಪ್ರವೇಶಿಸುವರು.]

**ಸುಲ್ತಾನ್:**— ಭಟರೇ, ಈಗಲೇ ಮಂಗಳವೇಢೆಗೆ ನಡೆದು ದಾಮಾಜಿ ಪಂತನನ್ನು

ಪದ ೨೧.

ರಾಗ: ಗೌಡಸಾರಂಗ — ಏಕ್ತಾ

ಹಿಡಿದು ತನ್ನಿರವನಾ । ಅ ।
ಕೆಡುಕನ, ಧೂರ್ತನ, ದುರುಳನ ‖ ಪ ‖

ಸಲೆ ಧಾನ್ಯದ ಮೌಲ್ಯವನು ।
ಕೊಡದಿರೆ ನಿಮ್ಮೊಡನೆ ‖
ಛಲದಿ ಬಿಗಿದು ತನ್ನಿರವನ ।
ತಳೆಯದೆ ಸಂಶಯವಾ ‖ ೧ ‖

ಆ ದಾಮಾಜಿಪಂತನು ದುರ್ವ್ಯಯಗೊಳಿಸಿದ ಸಮಸ್ತಧಾನ್ಯದ ಬೆಲೆ ಒಂದುಲಕ್ಷದ ಅರುವತ್ತೆಂಟುಸಾವಿರ ರೂಪಾಯಿಯನ್ನು ಕೊಡಲು ತಪ್ಪಿದರೆ, ಅವನನ್ನು ಬಂಧಿಸಿ ಕೂಡಲೇ ರಾಜಸಭೆಗೆ ತೆಗೆದುಕೊಂಡು ಬನ್ನಿರಿ! ನಡೆಯಿರಿ! ಈಗಲೇ ನಡೆಯಿರಿ!!

೧ನೆಯ ರಾಜಭಟ:—ಮಹಾಪ್ರಭೋ, ಯಾವ ದಾಮಾಜಿಪಂತ್?

ಸುಲ್ತಾನ್:—(ಹಲ್ಲುಕಡಿದು) ನನ್ನ ಅರಮನೆಯ ಅನ್ನವನ್ನುಂಡ ಅಮಲೇ ಹೀಗಿರುವುದೇ? ಮಂಗಳವೇಢೆಯ ದಾಮಾಜಿಯ ಪರಿಚಯವು ನಿಮಗಿಲ್ಲವೇ?

೨ನೆಯ ರಾಜಭಟ:—ಪ್ರಭೋ, ಠಾಣೆದಾರ ದಾಮಾಜಿಯವರೇ?

ಸುಲ್ತಾನ್:—ಆತನ ಠಾಣೆದಾರಹುದ್ದೆಗೆ ಬೆಂಕಿ ಬೀಳಲಿ! ನಡೆಯಿರಿ! ವೃಥಾಲಾಪದಿಂದ ಸಮಯವನ್ನು ಕಳೆಯಬೇಡಿರಿ. ನಡೆಯಿರಿ! ನಡೆಯಿರಿ!!

[ರಾಜಭಟರು ಹೋಗುವರು.]

ಸುಲ್ತಾನ್:—ಹಾಯ್! ಹಾಯ್! ದಾಮಾಜಿಯ ಸ್ವಾಮಿದ್ರೋಹವನ್ನೆಣಿಸಿದರೆ ಮೈ ಸುಡುವದಲ್ಲಾ!

[ಫರದೆ ಬೀಳುವುದು.]

## ದೃಶ್ಯ ೨.

[ರಾಜವೀಥಿಯಲ್ಲಿ ರಾಜಭಟರು ಪ್ರವೇಶಿಸುವರು.]

೧ನೆಯ ರಾಜಭಟ:—ದಾಮಾಜಿಪಂತರು ದೊಡ್ಡ ಮನುಷ್ಯರೆಂದು ಕೇಳಿ ಬಲ್ಲೆನು. ಅವರಿಗೆ ಪ್ರಾಪ್ತವಾಗಲಿರುವ ದುರವಸ್ಥೆಯನ್ನು ಎಣಿಸಿದರೆ ಕನಿಕರ ವುಂಟಾಗುವುದು.

೨ನೆಯ ರಾಜಭಟ:—ದೊಡ್ಡ ಮನುಷ್ಯರಾದರೇನು? ಸಣ್ಣ ಮನುಷ್ಯರಾದರೇನು? ಅವರು ಮಾಡಿದ ತಪ್ಪು ಸಾಧಾರಣವಾದುದಲ್ಲ.

೧ನೆಯ ರಾಜಭಟ:—ಬರಗಾಲಕ್ಕೀಡಾದ ಜನತೆಯ ರಕ್ಷಣೆಗಾಗಿ ತಿಳಿದೂ ತಿಳಿದು ಅವರು ಈ ತಪ್ಪು ಮಾಡಿರಬಹುದು.

೨ನೆಯ ರಾಜಭಟ:—ತಿಳಿದಿರಲಿ, ತಿಳಿಯದೆ ಇರಲಿ. ಅಗ್ನಿಜ್ವಾಲೆಯನ್ನು ಮುಟ್ಟಿದರೆ ಕೈ ಬೇರೆ ಸುಡದಿರದು. ಸುಲ್ತಾನರು ಅವರ ಅಪರಾಧಕ್ಕೆ ಶಾಸ್ತಿಯನ್ನು ಮಾಡಿಯೇ ಮಾಡುವರು.

೧ನೆಯ ರಾಜಭಟ:—ಆ ದಾಮಾಜಿಯವರನ್ನು ಪರಮಾತ್ಮನೇ ರಕ್ಷಿಸಲಿ!

೨ನೆಯ ರಾಜಭಟ:—ಇನ್ನು ವಿಳಂಬಮಾಡುವುದೇಕೆ? ಸುಲ್ತಾನ್ ಪಾಚ್ಛಾಯರ ಆಜ್ಞೆಯನ್ನು ಪರಿಪಾಲಿಸಬೇಕಾದುದು ನಮ್ಮ ಕರ್ತವ್ಯವಲ್ಲವೆ?

[ಹೋಗುವರು.]

## ದೃಶ್ಯ ೩.

[ದಾಮಾಜಿಪಂತನ ಮನೆ. ದಾಮಾಜಿಯು ದೇವಪ್ರಾರ್ಥನೆಯನ್ನು ಮಾಡುತ್ತಿರುವನು.]

### ಶ್ಲೋಕ.

ಸಶಂಖಚಕ್ರಂ ಸಕಿರೀಟಕುಂಡಲಂ ।
ಸಪೀತವಸ್ತ್ರಂ ಸರಸೀರುಹೇಕ್ಷಣಂ ॥
ಸಹಾರವಕ್ಷಸ್ಥಲಶೋಭಿಕೌಸ್ತುಭಂ ।
ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಂ ॥

### ಪದ ೨೨.

ರಾಗ: ವಸಂತ — ತ್ರಿವಟ

(ಮಹಾವಿಹಾರಾ, ಶ್ರೀಹಾರಾ) ಎಂಬಂತೆ

ಸದಾವಿಲಾಸಾ, । ದೇವೇಶಾ, ।
ಜಯ ಕೋಮಲ, ಕರು । ಣಾಲವಾಲ ಜಯ ॥ ಪ ॥

ಪರಮೇಶನೆ ತವ । ಚರಣಕೆ ನಮಿಪೆಂ ।
ಕರುಣದೆ ದಾಸನ । ಪರಿಪಾಲಿಪುದೈ ॥ ೧ ॥

[ಸೇವಕನೊಬ್ಬನು ಪ್ರವೇಶಿಸುವನು.]

**ಸೇವಕ:**— ಮಹಾಸ್ವಾಮಿಾ, ಸುಲ್ತಾನ್ ಬಾದಷಹರಿಂದ ಕಳುಹಲ್ಪಟ್ಟ ಇಬ್ಬರು ರಾಜಭಟರು ಬಂದಿರುವರು.

**ದಾಮಾಜಿ:**— ಅವರನ್ನು ಇಲ್ಲಿಗೆ ಬರಮಾಡು.

**ಸೇವಕ:**— ಅಪ್ಪಣೆ. [ಹೋಗುವನು.]

[ಇಬ್ಬರು ರಾಜಭಟರು ಪ್ರವೇಶಿಸುವರು.]

**ದಾಮಾಜಿ:**— ಸರದಾರರೆ, ವಿಶ್ರಮಿಸಿರಿ.

**೨ನೆಯ ರಾಜಭಟ:**— ನಮಗೆ ಸಾವಕಾಶಮಾಡಲ್ಕು ಉಪಾಯವಿಲ್ಲ. ಬಾದಷಹರ ಅನುಜ್ಞೆಯಂತೆ ನಾವು ನಿಮ್ಮಲ್ಲಿಗೆ ಬರಬೇಕಾಯ್ತಿತ್ತು.

**ದಾಮಾಜಿ:**— ಬಾದಷಹರ ಆನುಜ್ಞೆ ಏನು? ಕೇಳಬಹುದೇ?

೨ನೆಯ ರಾಜಭಟ:—ಬಾದಷಹರ ಒಪ್ಪಿಗೆಯಿಲ್ಲದೆ ರಾಜಕೀಯಧಾನ್ಯ ಕೋಶವನ್ನು ನೀವು ವ್ಯಯಗೊಳಿಸಿರುವಿರಲ್ಲವೇ? ಅದಕ್ಕಾಗಿ ಅವರು ನಿಮ್ಮ ಮೇಲೆ ಕೋಪಗೊಂಡು ಕಿಡಿಕಿಡಿಯಾಗಿರುವರು. ಧಾನ್ಯರಾಶಿಯ ಕ್ರಯ ಒಂದು ಲಕ್ಷದ ಅರುವತ್ತೆಂಟುಸಾವಿರ ರೂಪಾಯಿಯನ್ನು ನಿಮ್ಮಿಂದ ಪಡಕೊಳ್ಳ ಬೇಕೆಂದೂ ಇದಕ್ಕೆ ತಪ್ಪಿದರೆ ನಿಮ್ಮನ್ನು ಆಸ್ಥಾನಕ್ಕೆ ಒಯ್ಯಬೇಕೆಂದೂ ಅವರು ನಮಗೆ ಆಜ್ಞಾಪಿಸಿರುವರು.

ದಾಮಾಜಿ:—ಸರದಾರರೆ, ಬಾದಷಹರ ಕೋಪಕ್ಕೆ ನಾನು ಗುರಿಯಾಗ ಬಹುದೆಂದು ಚೆನ್ನಾಗಿ ಊಹಿಸಿದ್ದೆನು. ದುರ್ಭಿಕ್ಷದಂತಹ ದುರ್ಘಟಪ್ರಸಂಗದಲ್ಲಿ ಸುಲ್ತಾನರ ಒಪ್ಪಿಗೆಪಡಕೊಳ್ಳುವಷ್ಟು ಸಮಯವಾದರೂ ನನಗೆ ಸಿಕ್ಕಲಿಲ್ಲ.

೨ನೆಯ ರಾಜಭಟ:—ದಾಮಾಜಿಪಂತರೆ, ಸಾವಕಾಶಮಾಡಲು ಸಾಧ್ಯ ವಿಲ್ಲ. ನಿಮ್ಮ ಕುಟುಂಬದೊಡನೆ ಮಾತನಾಡುವುದಿದ್ದರೆ ಹಾಗೆ ಮಾಡಬಹುದು. ಸ್ವಲ್ಪ ವಿರಮಿಸಿ ಮತ್ತೆ ಬರುವೆವು.

[ರಾಜಭಟರು ಹೋಗುವರು. ಸಾವಿತ್ರಿಯು ಪ್ರವೇಶಿಸುವಳು.]

ಸಾವಿತ್ರಿ:—ದೇವಾ, ಪೂಜೆಯು ಮುಗಿಯಿತೇ?

ದಾಮಾಜಿ:—ಅಹುದು. ಪ್ರಿಯೇ, ಬಾದಷಹರ ಆಜ್ಞೆಯಂತೆ ನಾನು ಈಗ ಬೇದರಕ್ಕೆ ಹೊರಡಬೇಕಾಗಿದೆ.

ಸಾವಿತ್ರಿ:—(ದಿಗಿಲುಗೊಂಡು) ಏನು ಆಜ್ಞೆ ಅದು?

ದಾಮಾಜಿ:—

ಪದ ೨೩.

ರಾಗ: ಭೀಮಪಲಾಸ—ಝಂಪೆ
(ಪ್ರೇಮ ಸೇವಾಚರಣ) ಎಂಬಂತೆ

ಕೇಳಲೆ ಸುಗುಣಯುತೆ, । ಶೀಲೆ, ಗುಣವಂತೆ ನೀ ॥ ಪಲ್ಲ ॥
ತಾಳಿ ಕ್ರೋಧವ ನೃಪನು । ಗೈದನುಜ್ಞೆಯನು ॥ ಅ. ಪ. ॥

ಜನಕಿತ್ತ ಧಾನ್ಯದಾ । ಮೌಲ್ಯವನ್ನೀಯದಿರೆ ।
ಆನುವಿನಿಂ ಸೆಳೆತರಲು । ಕಳುಹಿರ್ಪ ಚರರ ॥ ೧ ॥

ಸಾವಿತ್ರಿ:—(ದಿಗಿಲುಗೊಂಡು) ಪಂಢರೀನಾಥಾ! ಎಂತಹ ಆಘಾತವಿದು! (ಮೂರ್ಛಿತಳಾಗುವಳು.)

**ದಾಮಾಜಿ:**—(ಶೈತ್ಯೋಪಚಾರಮಾಡಿ) ಪ್ರಾಣೇಶ್ವರಿ, ಇದೇನು ಪ್ರಮಾದವು?

**ಸಾವಿತ್ರಿ:**—(ಮೂರ್ಛೆಯಿಂದ ಎದ್ದು) ದೇವಾ, ನಮ್ಮ ಮೇಲೆ ಬಂದ ವಿಪತ್ತನ್ನು ಚಿಂತಿಸಿದರೆ ನನಗೆ ಪ್ರಾಣಗಳೇ ಭಾರವಾಗಿ ಕಾಣುವುದಲ್ಲ! (ಕೋಪಗೊಂಡು) ಮೂರ್ಖಶಿಖಾಮಣಿ ಬಾದಷಹನೇ! ಅವಿವೇಕಿಯಾದ ನಿನಗೆ ಅಧಿಕಾರವಿತ್ತವರಾರು? ನಿನ್ನ ಪ್ರಜಾಜನರ ಮೇಲೆ ಬಂದ ವಿಪತ್ತನ್ನು ಪರಿಹರಿಸಲು ಯತ್ನಿಸಿದವರ ಮೇಲೆ ಕೈಮಾಡುವೆಯಲ್ಲ—ನಿನ್ನ ಅಧಿಕಾರಕ್ಕೆ ಧಿಕ್ಕಾರವಿರಲಿ!

**ದಾಮಾಜಿ:**—ಪ್ರಿಯೇ, ಬಾದಷಹರನ್ನು ವ್ಯರ್ಥವಾಗಿ ದೂಷಿಸಬೇಡ. ಧಾನ್ಯಸಂಚಯವನ್ನು ನಿರಂಕುಶಪ್ರವರ್ತನೆಯಿಂದ ಬರಿದುಮಾಡಿದುದು ನನ್ನ ಅಪರಾಧವಲ್ಲವೆ? ಆದರೂ ಜನತಾರೂಪಿಯಾದ ಜನಾರ್ದನನ ಸೇವೆಮಾಡಿದುದೇ ಸಂತೋಷಕರವಾದ ವಿಷಯವು. ಬುದ್ಧಿವಂತೆಯಾದ ನೀನು ವಿವೇಕವನ್ನು ತೊರೆದು ನುಡಿಯುವುದು ಯುಕ್ತವೆ?

**ಸಾವಿತ್ರಿ:**—ಪ್ರಾಣೇಶಾ, ತಾವು ಎಷ್ಟು ಸಮಾಧಾನಹೇಳಿದರೂ ನನ್ನ ಮನಸ್ಸು ಬೇರೆ ಶಾಂತವಾಗದು. ತಮ್ಮ ದುರವಸ್ಥೆಯನ್ನೆಣಿಸಿ ನನ್ನ ಹೃದಯವು ಕಂಪಿಸುತ್ತಿರುವುದು.

**ದಾಮಾಜಿ:**—

### ಪದ ೨೪.

ರಾಗ: ಭೈರವಿ—ದಾದರಾ

(ಮನುಜನಿಗಿದು ತರುವುದಪಮಾನ) ಎಂಬಂತೆ

**ಮರುಗುವುದಿದು ತರವೆ ಗುಣವಂತೆ । ಮೂಢಳವೋಲ್ ।**
**ಇರುವುದಿದು ಕಾಂತೆ** ॥ ಪಲ್ಲ ॥

**(ದೋಹಾ)**

**ಪರಹಿತಕಾಗಿಯೆ ತನುವಿದ ।**
**ಕರುಣಿಸಿಹನು ಹರಿಯು ॥**
**ಬರಿದೆ ಸ್ವಾರ್ಥವ ಮಾಳ್ಪುದು ।**
**ತರವೆ ನೋಡು ಜಗದೆ** ॥ ೧ ॥

ಸ್ವಾರ್ಥಪರರಾದವರು ಇತರರಿಗೆ ಕೇಡನ್ನುಂಟುಮಾಡಿಯಾದರೂ ಸ್ವಸುಖವನ್ನು ಅಪೇಕ್ಷಿಸುವರು. ಆದರೆ ಧರ್ಮಜ್ಞರು ಸ್ವಜನೋದ್ಧಾರಕ್ಕಾಗಿ ಅರ್ಥಾತ್

ಸ್ವದೇಶೋದ್ಧಾರಕ್ಕಾಗಿ ತಮ್ಮ ತನುಮನಧನಗಳನ್ನರ್ಪಿಸಿ ದುರ್ಧರಕಷ್ಟಗಳಿಗಾದರೂ ಎದೆಯೊಡ್ಡಬಲ್ಲರು. ಎಂದಾದರೂ ಒಂದು ದಿವಸ ಬಿದ್ದು ಮಣ್ಣುಪಾಲಾಗುವ ಈ ದೇಹವು ಶಾಶ್ವತವಲ್ಲ. ನನ್ನ ಬಾಂಧವರನ್ನು ತಾಪವಿಮುಕ್ತರನ್ನಾಗಿ ಮಾಡಿದ ಆನಂದಜ್ಯೋತಿಯು ನನ್ನ ಹೃದಯವನ್ನು ಹೇಗೆ ಬೆಳಗುವುದು ನೋಡು!

**ಸಾವಿತ್ರಿ:**—ದೇವಾ, ತಮ್ಮ ವಚನಾಮೃತಪಾನದಿಂದ ನನ್ನ ಮೋಹವು ಮಾಯವಾಯಿತು. ತಮ್ಮ ಅನುಜ್ಞೆಯಂತೆ ವರ್ತಿಸಲು ಸಿದ್ಧಳಾಗಿದ್ದೇನೆ.

[ರಾಜಭಟರು ಪ್ರವೇಶಿಸುವರು.]

**೨ನೆಯ ರಾಜಭಟ:**—ಸಾವಕಾಶವಾಯಿತು. ತೀವ್ರ ಹೊರಡಲು ಸಿದ್ಧರಾಗಿರಿ.

**ದಾಮಾಜಿ:**—ಇದೋ, ಬಂದೆನು. (ಸಾವಿತ್ರಿಯನ್ನು ಕುರಿತು) ದೇವಿ, ವಿಠೋಬನ ಚರಣಗಳನ್ನು ನೆನೆದು ಸುಲೋಚನೆಯೊಂದಿಗೆ ನೆಮ್ಮದಿಯಿಂದಿರು. ಹೋಗಿ ಬರುವೆನು.

[ರಾಜಭಟರೊಡನೆ ದಾಮಾಜಿಯು ಹೋಗುವನು.]

**ಸಾವಿತ್ರಿ:**—(ದಾಮಾಜಿಯು ಹೋಗುವುದನ್ನು ದಿಟ್ಟಿಸಿ ನೋಡಿ) ಹಾ, ನನ್ನ ಜೀವಿತಸರ್ವಸ್ವದ ದಿವ್ಯಮೂರ್ತಿಯು ಮಾಯವಾಯಿತಲ್ಲಾ! ದೀನವತ್ಸಲಾ! ಪಾಂಡುರಂಗಾ!!

**ಪದ ೨೫.**

ರಾಗ: ಮಲ್ಹಾರ—ತ್ರಿವಟ

**ಜಯ ಮಾವರ, ಸುಖಕರ, । ಧೀರ, ಶುಭಂಕರ, ।**
**ಶ್ರೀಹರೇ ಪಾಹಿ ।**
**ದೇವನಿಕರ ಪೋಷಾ, ಈಶಾ** ॥ ಪ ॥

**ಭಕ್ತರನಳಲಿಪೆ ಬಳಲಿಪೆ ನೀನೆ, ।**
**ಶಕ್ತಿಯಿತ್ತು ಸಂರಕ್ಷಿಪೆ ನೀನೆ, ॥**
**ಮುಕ್ತಿದಾತ ನಿನ್ನಂತರಂಗವಾ ।**
**ಎಂತರಿವೆನೊ ಕಾಣೆ, ದೇವಾ** ॥ ೧ ॥

[ಅಂಕದ ತೆರೆ ಬೀಳುವುದು.]

**— ಇಂತಿದು ಚತುರ್ಥಾಂಕಂ —**

## ಐದನೆಯ ಅಂಕ

### ದೃಶ್ಯ ೧.

[ರಾಜವೀಥಿಯಲ್ಲಿ ದಿವ್ಯರೂಪಾಲಂಕೃತನಾದ ವಿಠಲನು ಪ್ರವೇಶಿಸುವನು.]

**ಪದ ೨೬.**

**ರಾಗ: ಜಿತಾಶ್ರೀ — ಏಕ್ತಾ**

(ಜನಕ ಸುಖವ ನೀಡುವುದೈ) ಎಂಬಂತೆ

ನಿಜ ಭಕಂತನು ಕಾತುರದಿಂ । ಬಳಲುತಿರುವನಾಹಾ ॥ ಪ ॥

ವಿತರಣಗುಣಶೂರನು ತಾ । ಕಷ್ಟದೊಳಿರುತಿಹನು ॥
ಗತಿಹೀನನ ಪಾಲಿಪೆ ನಾ । ಹಿತಸಾಧಿಸುತೀಗ ॥ ೧ ॥

ನನ್ನ ಭಕ್ತಾಗ್ರೇಸರನಾದ ದಾಮಾಜಿಪಂತನು ಪ್ರಕೃತ ಮಹಾವಿಪತ್ತಿಗೊಳಗಾಗಿರುವನು. ಆತನು ತನ್ನ ಸರ್ವಸ್ವವನ್ನು ನನಗೆ ಸಮರ್ಪಿಸಿರುವುದರಿಂದ ಆತನನ್ನು ಸಲಹುವ ಸರ್ವ ಭಾರವು ನನ್ನಮೇಲೆ ಬಿದ್ದಿರುವುದು. ಈ ಸಂದರ್ಭದಲ್ಲಿ ನಾನು ಆತನನ್ನು ರಕ್ಷಿಸದಿದ್ದರೆ, ಭಕ್ತವತ್ಸಲ—ಭಕ್ತಪರಾಧೀನ ಎಂಬಿತ್ಯಾದಿ ನನ್ನ ಬಿರುದಾವಳಿಯು ನಿರರ್ಥಕವಾಗುವುದಲ್ಲವೇ? ಅಲ್ಲದೆ ನಿರಾಶ್ರಿತರ ರಕ್ಷಣೆಗಾಗಿ ನಿಃಸ್ವಾರ್ಥದಿಂದಲ್ಲವೇ ಆತನು ಕಷ್ಟಕ್ಕೀಡಾಗಿರುವನು? ಅಂತಹ ಪರೋಪಕಾರಿಗಳ ಮತ್ತು ದೇಶಭಕ್ತರ ವಿಷಯದಲ್ಲಿ ಸದಾಕಾಲವೂ ನನ್ನ ಪ್ರೀತಿಯೂ, ಸಹಾನುಭೂತಿಯೂ ಇದ್ದೇ ಇರುವುದೆಂಬುದನ್ನು ಲೋಕಕ್ಕೆ ವ್ಯಕ್ತಪಡಿಸಬೇಕಾಗಿದೆ. ಇರಲಿ. ದಾಮಾಜಿಯನ್ನು ರಕ್ಷಿಸುವ ಬಗೆ ಹೇಗೆ? ಸುಲ್ತಾನನಿಗೆ ಧಾನ್ಯದ ಮೌಲ್ಯ ಒಂದುಲಕ್ಷ ಅರುವತ್ತೆಂಟುಸಾವಿರ ರೂಪಾಯಿ ಸಲ್ಲಿಸಬೇಕು. ಇಲ್ಲದಿದ್ದರೆ ಆ ಮೂರ್ಖನು ಅವನಿಗೆ ಮರಣದಂಡನೆಯನ್ನು ವಿಧಿಸುವನು. (ಆಲೋಚಿಸಿ) ಒಳ್ಳೆಯದು. ಹಾಗೆಯೇ ಮಾಡುವೆನು. ರಾಜಸಭೆಗೆ ಹೋಗುವಾಗ ನನ್ನ ನಿಜಸ್ಥಿತಿಯು ಪ್ರಕಟವಾಗಬಾರದಷ್ಟೆ! ನನ್ನ ಮಾಯಾಬಲದಿಂದ ಈಗಲೇ ಈ ರೂಪವೇಷಾದಿಗಳನ್ನು ಮಾರ್ಪಡಿಸುವೆನು.

[ಕ್ಷಣಾರ್ಧದಲ್ಲಿ ವಿಠಲನು ಹೊಲೆಯನ ವೇಷವನ್ನು ತಾಳುವನು.]

**ವಿಠೂಮಹಾರ್:**—(ತನ್ನ ಸರ್ವಾಂಗವನ್ನು ನೋಡಿ) ಈಗ ನಾನಾರು? ವಿಠಲನೇ? ಅಲ್ಲ; — ವಿಠೂಮಹಾರನು — ಹೊಲೆಯನು — ದಾಮಾಜಿಪಂತನ ಸೇವಕನು. ನನ್ನ ಭಕ್ತನ ಭೃತ್ಯನೆನ್ನಿಸಿಕೊಳ್ಳುವುದರಲ್ಲಿ ನನಗೇನೂ ಸಂಕೋಚ

ವಿಲ್ಲ. ದಾಮಾಜಿಯ ಪರವಾಗಿ (ಕೈಯೊಳಗಿನ ಹಣದ ಚೀಲವನ್ನು ನೋಡಿ) ಈ ಹಣವನ್ನು ಬಾದಷಹನಿಗೆ ಒಪ್ಪಿಸುವೆನು.

### ಪದ ೨೭.

ರಾಗ: ಬಹಾರ್—ಎಕ್ಕಾ
(ಸುರಪಾಲಾ ತ್ರೀಲೋಲಾ) ಎಂಬಂತೆ

ಕಡುಜವದೊಳ್ । ನಾ ಪೋಗಿ ।
ಕೊಡುವೆನೀಗ ಧನವಾ ।
ಸಲಿಸುವೆ ಭಕ್ತನ ಋಣವಾ ॥ ಪ ॥
ದಾಮಾಜಿಯು ಹಂಚಿದ ಬಲು । ಧಾನ್ಯದ ಮೌಲ್ಯವನು ॥
ನೇಮದೊಳೀವುತಲವನಾ । ಪ್ರಾಣರಕ್ಷಿಸುವೆನು ॥ ೧ ॥

[ಹೋಗುವನು.]

## ದೃಶ್ಯ ೨.

[ರಾಜವೀಥಿಯಲ್ಲಿ ದಾಮಾಜಿಪಂತನನ್ನೊಡಗೊಂಡು ರಾಜಭಟರು ಪ್ರವೇಶಿಸುವರು.]

**ದಾಮಾಜಿ:**—ಸರದಾರರೆ, ನನ್ನದೊಂದು ಬಿನ್ನಹವನ್ನು ಲಾಲಿಸುವಿರಾ?

**೧ನೆಯ ರಾಜಭಟ:**—ಏನದು?

**ದಾಮಾಜಿ:**—ಅದೋ, ಪಂಢರೀಕ್ಷೇತ್ರವು ಕಾಣಿಸುತ್ತಿರುವುದು. ವಿಠೋಬನ ದರ್ಶನಮಾಡಬೇಕೆಂಬ ಮಹತ್ವಾಕಾಂಕ್ಷೆ ನನಗಿದೆ. ಸ್ವಲ್ಪ ವಿರಾಮ ಕೊಡಬಲ್ಲಿರಾ?

**೧ನೆಯ ರಾಜಭಟ:**—ಆಗಬಹುದು. ಆದರೆ . . . . , . . .

**೨ನೆಯ ರಾಜಭಟ:**—ದೇವಾಲಯದಲ್ಲಿ ವಿಳಂಬಮಾಡಲು ಸಾಧ್ಯವಿಲ್ಲ. ತಿಳಿಯಿತೇ?

**ದಾಮಾಜಿ:**—ಆಗಬಹುದು.

[ಮೂವರೂ ಹೋಗುವರು.]

## ದೃಶ್ಯ ೩.

[ಪಂಢರಪುರದೇವಾಲಯ. ಸಂತರು ಭಜನೆಯಲ್ಲಿ ಮಗ್ನರಾಗಿರುವರು. ದಾಮಾಜಿಯೂ ರಾಜಭಟರೂ ಪ್ರವೇಶಿಸುವರು.]

**ಒಬ್ಬ ಭಜಕ:**—ಒಹೋ, ಮಹಾತ್ಮರಾದ ದಾಮಾಜಿಪಂತರು ದಯೆಮಾಡಿಸಿದರು.

**ಮತ್ತೊಬ್ಬ:**—ಹೌದು, ಹೌದು. (ದಾಮಾಜಿಯನ್ನು ಕುರಿತು) ಭಕ್ತ ಶಿಖಾಮಣಿ ದಾಮಾಜಿಪಂತರೇ, ನೀವು ಈ ದಿನ ನಮ್ಮೊಂದಿಗೆ ಕೆಲಹೊತ್ತು ಭಜನೆಮಾಡಬೇಕೆಂದು ಪ್ರಾರ್ಥಿಸುವೆವು.

**ದಾಮಾಜಿ:**—ಭಕ್ತವರೇಣ್ಯರೇ, ಭಜನೆಮಾಡಲು ನನಗೆ ಅವಕಾಶ ವಿಲ್ಲ. ಪಂಢರೀನಾಥನ ದರ್ಶನಕ್ಕಾಗಿ ಇಲ್ಲಿಗೆ ಬಂದೆನು. ಕ್ಷಮಿಸಿರಿ. [ವಿಠೋಬ ಮೂರ್ತಿಯಿದ್ದೆಡೆಗೆ ಹೋಗಿ ಪ್ರಣಾಮಗೈದು ಹಾಡುವನು.]

## ಪದ ೨೮.

ರಾಗ: ಮಾಂಡ್—ತ್ರಿವಟ

(ಬಾರೆ ಪಾಂಡುರಂಗಾ) ಎಂಬಂತೆ

ದೇವ ದೀನಬಂಧೋ, । ಸದ್ಗುಣಸಿಂಧೋ, ।
ಕಾವುದು ಮಾಧವ, । ಕರುಣವಗೊಂಡು ॥ ಪಲ್ಲ ॥

ತಾಯಿಯು ನೀನೆ, । ತಂದೆಯು ನೀನೆ, ।
ಕಾಯುವ ಬಂಧುವು । ಬಳಗವು ನೀನೆ ॥ ೧ ॥

ವಿಧವಿಧದಿಂದ । ಜೀವಿತಸಾಗಿಪ ।
ವಿಧಿಯೂ ನೀನೆ, । ವಿಧಾತಪಿತನೆ ॥ ೨ ॥

ನಿನ್ನನೆ ನಂಬಿದೆ, । ನಿನ್ನನೆ ನಂಬಿಹೆ, ।
ನಿನ್ನನೆ ನಂಬುವೆ । ಕಾಲತ್ರಯದೆ ॥ ೩ ॥

[ವಿಠೋಬಮೂರ್ತಿಗೆ ಸಾಷ್ಟಾಂಗವೆರಗುವನು.]

[ಪರದೆ ಬೀಳುವುದು.]

## ದೃಶ್ಯ ೪.

[ರಾಜವೀಥಿಯಲ್ಲಿ ಜೋಯಿಸ ಮತ್ತು ರಾಮಕೃಷ್ಣ ಭಟ್ಟರು ಪ್ರವೇಶಿಸುವರು.]

**ರಾಮಕೃಷ್ಣ ಭಟ್ಟ:**—ಓಹೋ, (ದಿಟ್ಟಿಸಿ ನೋಡಿ) ಜೋಯಿಸರು!—ನಮಸ್ಕಾರ.

**ಜೋಯಿಸ:**—ಯಾರು—ರಾಮಕೃಷ್ಣ ಭಟ್ಟರೊ? ನಮಸ್ಕಾರ ಸ್ವಾಮಿ—ನೋಡುವಾ—ನಿಮ್ಮ ನಸ್ಯ.

**ರಾ. ಭಟ್ಟ:**—(ನಸ್ಯಹುಡುಕುವಂತೆ ಮಾಡಿ) ನಸ್ಯದ ಭರಣಿ ಕಾಣುವುದಿಲ್ಲ ವಲ್ಲ!—ಎಲ್ಲಿ ಹೋಯಿತಪ್ಪಾ? ಐದು ರೂಪಾಯಿ ಕೊಟ್ಟು ತೆಕ್ಕೊಂಡ ಹೊಸ ಬುರುಡೆ—ಜೋಯಿಸರೆ, ನಿಮ್ಮ ಜ್ಯೋತಿಷ್ಯ ಸ್ವಲ್ಪ ಪ್ರಯೋಗಿಸಿ ಅದೆಲ್ಲಿ ಹೋಯಿತೆಂದು ಹೇಳಿ ನೋಡೋಣ!

**ಜೋಯಿಸ:**—(ಗಹಗಹಿಸಿ ನಕ್ಕು) ಹಹಹ! ಇಷ್ಟು ಅಲ್ಪ ವಿಷಯಕ್ಕೆಲ್ಲ ಜ್ಯೋತಿಷ್ಯವೆ? ಇಕೊಳ್ಳಿ ನಸ್ಯ. [ನಸ್ಯವನ್ನು ಕೊಡುವನು.]

**ರಾ. ಭಟ್ಟ:**—(ನಸ್ಯವನ್ನೇರಿಸಿ) ಅದು ಕದ್ದು ಹೋಯ್ತೊ, ಬಿದ್ದುಹೋಯ್ತೊ ಅಷ್ಟನ್ನಾದರೂ ಹೇಳಿ.

**ಜೋಯಿಸ:**— ಒಂದು ಸಂಖ್ಯೆಹೇಳಿ.

**ರಾ. ಭಟ್ಟ:**— ಎಂಭತ್ತೇಳು.

**ಜೋಯಿಸ:**—(ಕೈಬೆರಳುಗಳಿಂದ ಲೆಕ್ಕಮಾಡಿ) ಮೇಷ, ವೃಷಭ, ಮಿಥುನ – ಮಿಥುನ ರಾಶಿ—ಕುಜನ ಮತ್ತು ಶನಿಯ ವಕ್ರದೃಷ್ಟಿಯಿರುವುದರಿಂದ ಅದು ಕದ್ದು ಅಥವಾ ಬಿದ್ದು ಹೋಗಿರಲೇಬೇಕು.

**ರಾ. ಭಟ್ಟ:**—ಅಯ್ಯೊ! ಹೀಗೆ ಅಪಶಕುನಹೇಳಬಹುದೆ?

**ಜೋಯಿಸ:**—ನೋಡಿ—ಇದ್ದುದನ್ನು ಇದ್ದಹಾಗೆ ಹೇಳತಕ್ಕ ಜೋಯಿಸರು ನಾವು. ನಮ್ಮ ಗಣಿತವೂ ಅಷ್ಟು ಸೂಕ್ಷ್ಮ. ತಿಳಿಯಿತೆ?

**ರಾ. ಭಟ್ಟ:**—ಸ್ವಾಮಿ—ನಸ್ಯಂ ವಶ್ಯಕರಂ ಅಲ್ಲವೆ? ಆದರೂ ಈಗಿನ ಕೆಲವು ಯುವಕರು—ನೋಡಿ—ತಂಬಾಕುಬತ್ತಿಗಳನ್ನು ಬಾಯಲ್ಲಿಟ್ಟು ಹೊಗೆ ಬಿಡುತ್ತಾರೆ. ಆ ಹೊಗೆಯಲ್ಲಿ ಅವರಿಗೆ ಅರಮನೆಗಳೇ ಕಾಣುತ್ತವಂತೆ!

**ಜೋಯಿಸ:**—ಗಾಳಿಯೊಳಗಿನ ಅರಮನೆಗಳು! ಬಿಡಿ ಆ ವಿಷಯವನ್ನು.

[ಜೋಶಿಯು ಪ್ರವೇಶಿಸುವನು.]

**ಜೋಶಿ:**—ಸುಲ್ತಾನರಿಂದ ಕಳುಹಲ್ಪಟ್ಟ ಇಬ್ಬರು ಭಟರು ದಾಮಾಜಿಯವರನ್ನು ಬಂಧಿಸಿ ಬೇದರಕ್ಕೊಯ್ದರು.

**ರಾ. ಭಟ್ಟ:**— ಇದು ನಿಜವೇ?

**ಜೋಶಿ:**—ಹೌದು ಸ್ವಾಮಿ, ನಾನು ಪ್ರತ್ಯಕ್ಷ ನೋಡಿದ ವಿಷಯ. ನಮಗೆಲ್ಲ ಧಾನ್ಯವನ್ನು ಕೊಟ್ಟುದಕ್ಕಾಗಿ ಸುಲ್ತಾನರು ದಾಮಾಜಿಪಂತರಮೇಲೆ ಕೋಪಿಸಿ, ಅವರಿಗೆ ಕಠಿನಶಿಕ್ಷೆಯನ್ನೇ ವಿಧಿಸುವರಂತೆ! ನಾವೀಗಲೇ ಬೇದರಕ್ಕೆ

ಹೋಗಿ, ಬಾದಷಹರನ್ನು ಸಂತೈಸಿ ಮಹಾತ್ಮರಾದ ದಾಮಾಜಿಪಂತರನ್ನು ಉಳಿಸುವ ಉಪಾಯವನ್ನು ನೋಡಬೇಕಾಗಿದೆ.

**ರಾ. ಭಟ್ಟ:**—ನಿಶ್ಚಯ. ಹಾಗೆಯೇ ಮಾಡೋಣ.

(ಜೋಯಿಸರನ್ನು ಕುರಿತು)

ಜೋಯಿಸರೆ, ಬರುತ್ತೀರೊ?

**ಜೋಯಿಸ:**—ನೀವು ಹೋಗಿ. ನಾನು ಮನೆಗೆ ಹೋಗಿ ಈ ಕ್ಷಣ ಬರುತ್ತೇನೆ.

[ಹೋಗುವರು.]

## ದೃಶ್ಯ ೫.

[ಬಾದಷಹನ ಸಭೆ. ಮಂತ್ರಿ, ಸೇನಾಪತಿ, ವಿದೂಷಕ, ಕೋಶಾಧ್ಯಕ್ಷ, ಮುಜುಮ್ದಾರರು ಕುಳಿತಿರುವರು.]

**ಸುಲ್ತಾನ್:**—ರಾಜಭಟರು ಇನ್ನೂ ಬಾರದಿರಲು ಕಾರಣವೇನಿರಬಹುದು?

**ಮಂತ್ರಿ:**—ಪ್ರಭೋ, ಈಗ ಬರಬಹುದು.

[ತೆರೆಯೊಳಗಿಂದ]

"ಸುಲ್ತಾನ್ ಬಾದಷಹರಿಗೆ ಜಯವಾಗಲಿ."

**ಸುಲ್ತಾನ್:**—ಸಮಾಚಾರವೇನು?

[ತೆರೆಯೊಳಗಿಂದ]

"ಬಾದಷಹರ ಸಂದರ್ಶನಾರ್ಥವಾಗಿ ಯಾರೋ ಒಬ್ಬನು ದ್ವಾರದಲ್ಲಿ ಕಾಯುತ್ತಿರುವನು."

**ಸುಲ್ತಾನ್:**—ಆತನನ್ನು ಇಲ್ಲಿಗೆ ಬರಮಾಡು.

[ಚಿಕ್ಕ ಹಣದ ಚೀಲವನ್ನು ಹಿಡಿದುಕೊಂಡು ವಿಠೂಮಹಾರನು ಪ್ರವೇಶಿಸುವನು.]

**ಸೇನಾಪತಿ:**—ಎಲವೋ! ಬಾದಷಹರ ಸಮಕ್ಷಮದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ರೀತಿ ನಿನಗೆ ಗೊತ್ತಿಲ್ಲವೇ? ಬಾದಷಹರಿಗೆ ಎರಗು!

**ವಿದೂಷಕ:**—ಸೇನಾಧೀಶರೆ, ಕೋಪಿಸದಿರಿ. ಆತನ ರೂಪವೇಷಾದಿಗಳನ್ನು ನೋಡಿದ ಮಾತ್ರಕ್ಕೆ ಆತನು ನಮ್ಮಂತೆ—ನಿಮ್ಮಂತೆ ನಾಗರಿಕನಲ್ಲ ಎಂಬ ವಿಷಯವು ಸ್ಪಷ್ಟವಾಗಿ ತಿಳಿಯುವುದಲ್ಲ.

**ಸುಲ್ತಾನ್**:—ನಿಜ, ನಿಜ. ಆತನ ವಿಷಯವಾಗಿ ಕೋಪಗೊಳ್ಳುವ ಬದಲಾಗಿ ಕರುಣೆಗೊಳ್ಳಬೇಕಾಗಿದೆ. ಆತನು ನಾಡಿಗನೆಂದು ಭಾಸವಾಗುವುದು.

**ವಿಠೂ**:—ಏನು? ನಾಡಿಗನೆಂದು ಕರುಣೆಗೊಳ್ಳುವಿರಾ? ಐಶ್ವರ್ಯ ಸಂಪನ್ನರಾದರೂ, ಮದಾಂಧರಾದ ನೀವು ಕೇಡಿಗರೆಂದು ನಾನೇಕೆ ಕರುಣೆಗೊಳ್ಳದಿರಲಿ?

**ಸೇನಾಪತಿ**:—ಪ್ರಭೋ, ಈತನ ಮಾತುಗಳನ್ನು ಕೇಳಿದಿರಾ?

**ಮಂತ್ರಿ**:—ಎಲೈ, ನೀನು ಯಾರೊಡನೆ ಮಾತಾಡುತ್ತಿರುವೆ ಎಂಬುದನ್ನು ಬಲ್ಲೆಯಾ?

**ವಿಠೂ**:—ಬಲ್ಲೆನು. ಚೆನ್ನಾಗಿ ಬಲ್ಲೆನು.

[ಸುಲ್ತಾನನು ಗಹಗಹಿಸಿ ನಗುವನು.]

**ವಿದೂಷಕ**:—ಶಹಭಾಸ್! ಹಳ್ಳಿಯವನಾದರೂ ಈತನಲ್ಲಿ ಒಳ್ಳೆಯ ಜಾಣ್ಮೆಯಿದೆ.

**ಸುಲ್ತಾನ್**:—ಎಲವೋ, ನೀನು ಯಾರು? ಮತ್ತು ಇಲ್ಲಿಗೆ ಬಂದ ಉದ್ದೇಶವೇನು?

**ವಿಠೂ**:—ಲಾಲಿಸಬೇಕು.

## ಪದ ೨೯.

ರಾಗ: ಸೋಹನಿ—ಏಕತಾಳ

(ಪತಿನಿಲಯವನಗಲಿ ನಾನು) ಎಂಬಂತೆ

ಪರಮದಾನಶೂರನೆನಿಸಿ |
ಮೆರೆಯುವ ದಾಮಾಜಿಯವರ ||
ಚರಣಸೇವಕನು ನಾನು |
ನರಪತಿ ಕೇಳುವುದೈ || ಪಲ್ಲ ||

ಜನಕಿತ್ತಿಹ ಧಾನ್ಯದ ಬೆಲೆ | ಯನು ತಂದಿರುವೆನು ನಾ ||
ಎಣಿಕೆಯಿಂದ ಪರಿಗ್ರಹಿಪುದು | ಜನಪತಿ ಸಮ್ಮುದದೆ || ೧ ||

ಉದಾರಶೀಲರೂ ಸಚ್ಚರಿತ್ರರೂ ಆದ ನನ್ನ ಒಡೆಯ ದಾಮಾಜಿಪಂತರು ತಮಗೆ ಸಲ್ಲತಕ್ಕ ಹಣವನ್ನೂ ಪತ್ರವನ್ನೂ ಕೊಟ್ಟಿರುವರು.

**ಸುಲ್ತಾನ್**:—ಎಲ್ಲಿ ಆ ದಾಮಾಜಿಪಂತನು? ಆತನನ್ನು ಬಂಧಿಸಿತರಲು ಆಗಲೇ ಭಟರನ್ನು ಕಳುಹಿಸಿದ್ದೆನು.

**ವಿಠೂ:**—ದಾಮಾಜಿಪಂತರು ವ್ಯಯಗೊಳಿಸಿದ ಸೊತ್ತಿನ ಮೌಲ್ಯವನ್ನು ನನ್ನ ಕೂಡೆ ಕಳುಹಿಸಿರಲು ಅವರ ಬಂಧನದ ವಿಚಾರವು ಅನಗತ್ಯವಷ್ಟೆ!

**ಮುಜು:**—(ಕೋಪನಟಿಸಿ) ಎಲಾ ಹೀನಕುಲದವನೇ, ನಾಲಗೆಯನ್ನು ಸಡಿಲುಬಿಡಬೇಡ. ಇದು ರಾಜಸಭೆಯೆಂಬುದನ್ನು ನೆನಪಿನಲ್ಲಿಡು. ಜೋಕೆ!

**ವಿಠೂ:**—ಎಲೈ ಗೋಮುಖವ್ಯಾಘ್ರನೇ! ನಿಮ್ಮ ಟೊಳ್ಳು ಬೆದರಿಕೆಗೆ ಹೆದರುವವನು ನಾನಲ್ಲ. ವ್ಯರ್ಥವಾಗಿ ಕೂಗಬೇಡಿ!

**ಸುಲ್ತಾನ್:**—(ನಕ್ಕು) ಈತನು ಒಳ್ಳೇ ಚತುರನಿರುವನು. ಎಲೈ ದೂತನೇ, ಕೋಪಿಸದಿರು. ಸಮಾಚಾರವೇನೆಂಬುದನ್ನು ತಿಳಿಸು.

**ವಿದೂಷಕ:**—ಈತನು ಅಶಿಕ್ಷಿತನೆಂದು ಮೊದಲು ಭಾವಿಸಿದ್ದೆನು. ಈಗ ನೋಡಿದರೆ ನಮ್ಮಿಂದಲೂ ಸುಶಿಕ್ಷಿತನೇ ಸರಿ.

**ಸುಲ್ತಾನ್:**—ಎಲ್ಲಿ—ದಾಮಾಜಿಯು ಕೊಟ್ಟ ಪತ್ರ? ನೋಡೋಣ.

[ವಿಠೂಮಹಾರನು ಪತ್ರವನ್ನು ಸುಲ್ತಾನನ ಮುಂದಿರಿಸುವನು]

**ಸುಲ್ತಾನ್:**—(ಪತ್ರವನ್ನು ಮಂತ್ರಿಯ ಕೈಯಲ್ಲಿ ಕೊಟ್ಟು) ಮಂತ್ರಿವರ್ಯರೇ, ಈ ಪತ್ರದ ಸಾರಾಂಶವೇನು?

**ಮಂತ್ರಿ:**—[ಪತ್ರವನ್ನೋದುವನು.]

"ಸುಲ್ತಾನ ಬಾದಷಹರ ಸನ್ನಿಧಾನಕ್ಕೆ—ವಿಜ್ಞಾಪನೆಗಳು. ಕ್ಷಾಮಪೀಡಿತರಾದ ಪ್ರಜಾಜನರು ಹಸಿವಿಂದ ಬಳಲಿ ಬೆಂಡಾಗಿ ಕಂಗೆಟ್ಟಿರುವದನ್ನು ಕಣ್ಣಾರೆ ಕಾಣಲಸದಳವಾಯಿತು. ಬಾದಷಹರ ಅನುಮತಿಪಡೆಯುವಷ್ಟು ಅವಕಾಶವೂ ಇಲ್ಲವಾಯಿತು. ಅಂತು ಧಾನ್ಯಸಂಚಯವನ್ನು ವ್ಯಯಮಾಡಿದೆನು. ತಪ್ಪನ್ನು ಕ್ಷಮಿಸುವುದು. ಧಾನ್ಯದ ಕ್ರಯ ರೂಪಾಯಿ ಒಂದುಲಕ್ಷ ಅರುವತ್ತೆಂಟು ಸಾವಿರವನ್ನು ನನ್ನ ಸೇವಕ ವಿಠೂಮಹಾರನೊಡನೆ ಕಳುಹಿಸಿರುವೆನು. ಪಡೆದುಕೊಂಡು ಪಾವತಿಯನ್ನು ದಯೆಪಾಲಿಸುವುದು.

ಇತಿ

ವಿಧೇಯ,

**ದಾಮಾಜಿಪಂತ.**"

**ಸುಲ್ತಾನ್:**—(ವಿಠೂವನ್ನು ಕುರಿತು) ನಿನ್ನ ಹೆಸರು ವಿಠೂಮಹಾರನೆಂದೇ?

**ವಿಠೂ:**—ನನ್ನ ಹೆಸರು ಏನಾದರೇನು? ಅದನ್ನು ಪ್ರಕೃತ ಪ್ರಕಟಿಸುವ ಅವಶ್ಯವಿಲ್ಲವಷ್ಟೆ! ಇರಲಿ. ನನಗೆ ಅಸಂಖ್ಯಾಕ ಹೆಸರುಗಳಿರುವುವು. ಸದ್ಯಕ್ಕೆ ವಿಠೂಮಹಾರನೆಂದು ನನ್ನನ್ನು ಕರೆಯಬಹುದು.

**ವಿದೂಷಕ:**— ಹುಟ್ಟಿದ ಹನ್ನೆರಡನೆಯ ದಿನ ನಾಮಕರಣಮಾಡುವಾಗ ಹತ್ತು ಹನ್ನೆರಡು ಹೆಸರುಗಳನ್ನಿಡುವ ವಾಡಿಕೆ ನಮ್ಮಲ್ಲುಂಟು. ಆದರೆ ಲೆಕ್ಕ ವಿಲ್ಲದಷ್ಟು ಹೆಸರೆಂಬುದು ಅತ್ಯದ್ಭುತವಾದ ವಿಷಯವೇ ಸರಿ.

**ಸುಲ್ತಾನ್:**— ವಿಠೂಮಹಾರ್, ನೀನು ದಾಮಾಜಿಯ ಭೃತ್ಯವರ್ಗಕ್ಕೆ ಸೇರಿದವನೆಂದು ಹೇಳುವೆಯಲ್ಲ! ನಿನ್ನ ಜಾತಿಕುಲಗಳಾವುದು?

**ವಿಠೂ:**— ಬಾದಷಹರೆ, ಈ ಹಣವನ್ನು ಕೊಡುವುದಕ್ಕಾಗಿ ಇಲ್ಲಿಗೆ ಬಂದಿರುವೆನಲ್ಲದೆ ನನ್ನ ಜಾತಿ, ಕುಲ, ಗೋತ್ರಗಳನ್ನು ಜಾಹೀರುಮಾಡಲಿಕ್ಕಲ್ಲ.

[ಸೇನಾಪತಿ, ಮುಜುಮ್ದಾರರು ಹಲ್ಲುಕಡಿದು ಕೋಪವನ್ನು ಸೂಚಿಸುವರು.]

**ಮಂತ್ರಿ:**— ವಿಠೂಮಹಾರ್, ಬಾದಷಹರ ಇದಿರಿನಲ್ಲಿ ಗೌರವಬುದ್ಧಿಯಿಂದ ನಡೆದುಕೊಳ್ಳಬೇಕೆಂಬುದನ್ನು ಮರೆಯಬೇಡ.

**ಸುಲ್ತಾನ್:**— ವಿಠೂ, ನನ್ನ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಕೊಡ ಬೇಕು. ಗೊತ್ತಾಯಿತೆ?

**ವಿಠೂ:**— ಪ್ರಶ್ನೆಯು ಸಮರ್ಪಕವಾದರಲ್ಲವೆ ಉತ್ತರವೂ ಸಮರ್ಪಕವಾಗು ವುದು!

**ಸುಲ್ತಾನ್:**— ಭೃತ್ಯವರ್ಗದವನಾದರೂ ನಿನ್ನ ಚಟುವಟಿಕೆಯನ್ನು ನೋಡಿ ನನಗೆ ನಿನ್ನ ವಿಷಯದಲ್ಲಿ ಪ್ರೀತಿಯುಂಟಾಗಿದೆ. ಹೇಳು, ನಿನ್ನ ಕುಲಜಾತಿಗಳ ವಿವರವನ್ನು— ಕೇಳೋಣ.

**ವಿಠೂ:**— ವಿಷಯವನ್ನು ಬಿಟ್ಟು ತಾವು ಅಲ್ಲದಸಲ್ಲದ ಪ್ರಶ್ನೆಗಳನ್ನು ಕೇಳು ವಿರಲ್ಲ! ನನಗೆ ಎಲ್ಲರಂತೆ ಪ್ರತ್ಯೇಕವೊಂದು ಕುಲವಾಗಲೀ ಜಾತಿಯಾಗಲೀ ಇಲ್ಲ. ಪ್ರಕೃತ ನನ್ನನ್ನು ಅಂತ್ಯಜಕುಲಕ್ಕೆ ಸೇರಿಸಬಹುದು.

**ವಿದೂಷಕ:**— (ಕೈಬೆರಳನ್ನು ಕಚ್ಚಿ ಸ್ವಗತಂ) ಆಹಾ! ಮೋಸವಾಯಿತು. ಈತನು ಹೊಲೆಯನೆಂದು ಯಾರಿಗೆ ಗೊತ್ತು? ಈತನು ತನ್ನ ಜಾತಿಯನ್ನು ಹೇಳದಿ ದ್ದರೆ ಒಳ್ಳೆಯದಾಗುತ್ತಿತ್ತು. ಮನೆಗೆ ಹೋದನಂತರ ಚಳಿನೀರಿನ ಸ್ನಾನಮಾಡುವ ಪ್ರಸಂಗ ಬಂತಲ್ಲ!

**ಸುಲ್ತಾನ್:**— ವಹ್ವಾ, ವಿಠೂ, ಶಹಭಾಸ್! ಜಾತಿಯಲ್ಲಿ ಹೊಲೆಯನೂ ವೃತ್ತಿಯಲ್ಲಿ ಸೇವಕನೂ ಆಗಿದ್ದರೂ ನೀನು ಬಹಳ ಜಾಣನಾಗಿರುವೆ!

**ವಿದೂಷಕ:**—(ಸ್ವಗತಂ) ಇಸ್ಸಿ! ಈ ಹೊಲೆಯನೂ ಜಾಣನೆಂದಾದರೆ ಹಲವು ಗ್ರಂಥಗಳ ಹಾಳೆಗಳನ್ನೇ ಮಗಚಿದ ಈ ವಿದ್ವಾನ್‌ಬ್ರಾಹ್ಮಣನು ಇಲ್ಲಿರ

ಬಲ್ಲನೇ? ಅವನ ಬುದ್ಧಿವಂತಿಕೆ— ಇವನ ತಲೆದೂಗುವಿಕೆ— ಆ ತಾಳ, ಈ ಮೇಳ ಎಂಬಂತೆ ಬಹಳ ಚೆನ್ನಾಗಿದೆ.

**ವಿಠೂ:**—ಬಾದಷಹರೆ, ಸಾವಕಾಶವಾಯಿತು. ತಮ್ಮೊಡನೆ ಹೆಚ್ಚಿಗೆ ಮಾತನಾಡಲು ನನಗೆ ಸಮಯವಿಲ್ಲ.

### ಪದ ೩೦.

ರಾಗ: ಯಮುನ್— ತ್ರಿವಟ

(ಸಖಿ ತಾ ಕಾಣುವಳು) ಎಂಬಂತೆ

ಜನಪಾಲಾ ದಯದೆ । ಸ್ವೀಕರಿಪುದೈ ।
ಧನವಿದನು ತಡ । ಮಾಡದೆ ॥ ಪಲ್ಲ ॥
ಇರುವುದೆನಗೆ ತಾ । ನಧಿಕಕಾರ್ಯವು ।
ತ್ವರಿತದೆ ಪೋಗಲು । ತವಕಿಸುತಿಹೆನು ॥
ಬರಿದೆ ಸಮಯ । ಕಳೆಯಬೇಡೈ ।
ಬರಿಮಾತಿನೊಳ್, ಹಾ, । ವ್ಯರ್ಥದೊಳ್ ॥ ೧ ॥

ಈ ಹಣವನ್ನು ಪಡೆದುಕೊಂಡು, ಪಾವತಿಯನ್ನು ದಯೆಪಾಲಿಸಿರಿ. [ಹಣದ ಚೀಲವನ್ನು ಬಾದಷಹನ ಮುಂದಿಡುವನು.]

**ಸುಲ್ತಾನ್:**— ಕೋಶಾಧ್ಯಕ್ಷರೇ, ಆ ಹಣವನ್ನು ಎಣಿಕೆಯಿಂದ ತೆಗೆದು ಕೊಳ್ಳಿರಿ.

**ಕೋಶಾಧ್ಯಕ್ಷ:**—ಮಹದಾಜ್ಞೆ. (ಹಣದ ಚೀಲವನ್ನು ತೆಗೆದುಕೊಂಡು ಆಶ್ಚರ್ಯಗೊಂಡು) ಇಷ್ಟು ಸಣ್ಣ ಚೀಲದಲ್ಲಿ ಒಂದುಲಕ್ಷದ ಅರುವತ್ತೆಂಟುಸಾವಿರ ರೂಪಾಯಿ ಇರಬಲ್ಲುದೇ?

**ವಿಠೂ:**— ಉಂಟು. ಅದರಲ್ಲಿ ಸಂದೇಹವೇನು?

**ವಿದೂಷಕ:**— (ಕೊರಳನ್ನೆತ್ತಿ ಚೀಲವನ್ನು ಇಣಿಕಿನೋಡಿ) ನನ್ನ ಬಾಯಲ್ಲಿ ಲಾಡುಗಳನ್ನು ತೂರಿದಂತೆ ತೂರಿದರೆ ಅದರಲ್ಲಿ ನೂರು ವರಹಗಳು ಹಿಡಿಯ ಬಹುದೋ ಏನೋ!

[ಕೋಶಾಧ್ಯಕ್ಷನು ಹಣದ ಚೀಲವನ್ನು ಹಿಡಿದುಕೊಂಡು ಒಳಪ್ರವೇಶಿಸುವನು.]

**ಸುಲ್ತಾನ್:**— ವಿಠೂ, ನೀನು ತವಕಗೊಳ್ಳುವುದೇಕೆ? ದಾಮಾಜಿಪಂತನು ನನ್ನ ಭೃತ್ಯವರ್ಗಕ್ಕೆ ಸೇರಿದವನಲ್ಲವೇ? ಎಂದಮೇಲೆ ನನ್ನಿಂದಾಗಿ ಸ್ವಲ್ಪ ತಡ ವಾದರೆ ಆತನು ನಿನ್ನಲ್ಲಿ ಕೋಪಿಸನು.

**ವಿಠೂ:**— ದಾಮಾಜಿಪಂತರು ತಮ್ಮ ಭೃತ್ಯರಾಗಿರಬಹುದು. ಆದರೆ ನಾನು ಮಾತ್ರ ತಮ್ಮ ಸೇವಕನಲ್ಲವೆಂಬುದನ್ನು ತಿಳಿಯಿರಿ.

**ಸುಲ್ತಾನ್:**— ಭೃತ್ಯನ ಭೃತ್ಯನೂ ಭೃತ್ಯನಾಗುವನಲ್ಲವೇ?

**ವಿಠೂ:**— ಅಲ್ಲ. ನಾನು ತಮ್ಮ ಸೇವಕನಲ್ಲ.

**ಮುಜು:** — (ಕೋಪನಟಿಸಿ) ಏನು ಗಳಹುತ್ತಿರುವೆ? ನಾಲಗೆಯನ್ನು ಬಿಗಿ ಹಿಡಿದು ಮಾತನಾಡು!

**ಸೇನಾಪತಿ:** — (ಗಾಂಭೀರ್ಯದಿಂದ) ಛೀ, ಮೂಢಪಶು! ನಿನ್ನ ದುರಹಂಕಾರವನ್ನು ತೋರಿದರೆ ಕೇಡನ್ನು ಅನುಭವಿಸುವೆ. ಜೋಕೆ!

**ವಿಠೂ:** — ಛೀ, ಗಾರ್ದಭಜನ್ಮದವರೆ! ವ್ಯರ್ಥಾಲಾಪಮಾಡದಿರಿ.

**ಸುಲ್ತಾನ್:** — (ನಕ್ಕು) ಅಮಮಾ! ಈತನೆಂತಹ ಧೀರನು! (ಸೇನಾಪತಿ ಮುಜುಮ್ದಾರರನ್ನು ಕುರಿತು) ಸೇನಾಪತಿ— ಮುಜುಮ್ದಾರರೇ, ವಿಠೂಮಹಾರನು ಅನಾಗರಿಕನು. ಅವನೊಡನೆ ನಿಮ್ಮ ವಾಗ್ವಾದವನ್ನು ಬಳೆಯಿಸದಿರಿ.

[ಕೋಶಾಧ್ಯಕ್ಷನು ಪ್ರವೇಶಿಸುವನು.]

**ಕೋಶಾಧ್ಯಕ್ಷ:** — ಮಹಾಪ್ರಭೋ, (ಚೀಲವನ್ನು ನೋಡಿ) ವಿಠೂಮಹಾರನ ಈ ಚೀಲವು ಅದ್ಭುತಕಾರಿಯಾಗಿದೆ. ಇದರಲ್ಲೇನೋ ಮಾಯೆಯಿರಬೇಕು. ಇದರೊಳಗಿನ ರೂಪಾಯಿಯನ್ನು ಕೆಳಗೆ ಚೆಲ್ಲಿದಷ್ಟಕ್ಕೆ ಇದು ತನ್ನಿಂದ ತಾನೇ ಹಣದಿಂದ ತುಂಬುತ್ತಲಿರುವುದು. ಎಣಿಕೆಮಾಡಿ ಮಾಡಿ, ನನ್ನ ಕೈಗಳು ಸೋತು ಹೋದುವು. ಒಂದುಲಕ್ಷದ ಅರುವತ್ತೆಂಟುಸಾವಿರ ರೂಪಾಯಿಗಿಂತ ಹೆಚ್ಚಿನ ದ್ರವ್ಯವೇ ಇದರಲ್ಲಿ ಕಾಣಿಸುತ್ತಿರುವುದು.

**ಮುಜು:** — (ಸ್ವಗತಂ — ಕೈಬೆರಳನ್ನು ಕಚ್ಚಿ) ನಾನರಿಯದ ದಾಮಾಜಿಪಂತನ ದೂತನಿವನಾರು? ಇವನ ಚಮತ್ಕೃತಿಯು ನನ್ನ ಕಾರ್ಯಭಂಗವನ್ನುಂಟು ಮಾಡಿತು. ನಾನು ಭಾಗ್ಯಹೀನನೇ ಸರಿ.

**ಸುಲ್ತಾನ್:** — ಮುಜುಮ್ದಾರ್, ದಾಮಾಜಿಯವರ ಸೇವಕನಾದ ಈ ವಿಠೂಮಹಾರನ ಪರಿಚಯವು ನಿಮಗಿಲ್ಲವೇ?

**ಮುಜು:** — (ಅಂಜಿಕೆಗೊಂಡು) ಇಲ್ಲ, ಮಹಾಪ್ರಭೋ, ಇವನನ್ನು ನಾನು ಕಂಡುದು ಇಲ್ಲೇ — ಈ ಸಭೆಯಲ್ಲೇ ಮೊತ್ತಮೊದಲು.

**ವಿಠೂ:** — ಬಾದಷಹರೇ! (ವ್ಯಂಗ್ಯವಾಗಿ ನಕ್ಕು) ಈ ಮುಜುಮ್ದಾರರು ನನ್ನನ್ನು ತಿಳಿಯದಿದ್ದರೂ ಇವರ ವಿಚಾರವನ್ನು ನಾನು ಚೆನ್ನಾಗಿ ಬಲ್ಲೆನು. ಠಾಣೆದಾರರಾದ ದಾಮಾಜಿಪಂತರಮೇಲೆ ದೋಷಾರೋಪಣೆಮಾಡಿ, ಅವರ

ಪದವಿಯನ್ನು ತಾನು ಹೊಂದಬೇಕೆಂಬ ದುರಾಶೆಯಿಂದ ಇವರು ಒಂದೆರಡು ತಂತ್ರಗಳನ್ನು ಹೂಡಿ ಅವರನ್ನು ನೀತಿಭ್ರಷ್ಟರನ್ನಾಗಿ ಮಾಡಲು ಯತ್ನಿಸಿದರು. ನೀತಿವಂತರಾದ ಅವರನ್ನು ಕೆಡಿಸಲು ಇವರಿಗೆ ಸಾಧ್ಯವಾಗಲಿಲ್ಲ. ಏತನ್ಮಧ್ಯೆ ಪಂಢರಪುರಪ್ರಾಂತದಲ್ಲಿ ಕ್ಷಾಮವು ಪ್ರಾಪ್ತವಾಯಿತು. ತನ್ನ ಕಾರ್ಯಸಾಧನೆಗೆ ಇದೇ ಸುಸಂದರ್ಭವೆಂದು ನೆನೆದು, ದಾವಾಜಿಪಂತರನ್ನು ಕಾಡಿ ಬೇಡಿ ಆಹಾರವನ್ನು ಪಡೆಯಬೇಕೆಂದು ಬರಗಾಲಕ್ಕೀಡಾದ ಜನರಿಗೆ ಇವರು ಕಲಿಸಿ ಕೊಟ್ಟರು. ಆಮೇಲೆ ದುರ್ಭಿಕ್ಷದಂತಹ ಅಕಸ್ಮಾತ್‌ಪ್ರಸಂಗದಲ್ಲಿ ರಾಜಾಜ್ಞೆಯನ್ನು ಹಿಂದಿನಿಂದ ಪಡೆದುಕೊಳ್ಳುವ ನಿರೀಕ್ಷಣೆಯಲ್ಲಿ ಸರಕಾರಿ ಧಾನ್ಯ ಕೋಶದ ದವಸಗಳನ್ನು ಪ್ರಜಾಜನರಿಗೆ ಹಂಚುವ ದಾವಾಜಿಯವರ ಸಲಹೆಯನ್ನು ಚೆನ್ನಾಗಿ ಅನುಮೋದಿಸಿದರು. ಅಲ್ಲಿ ಹಾಗೆ ವರ್ತಿಸಿ, ಇಲ್ಲಿಗೆ ಬಂದು ಅವರು ಅಕೃತ್ಯವನ್ನು ಮಾಡಿರುವರೆಂದು ತಮ್ಮನ್ನು ಸಿಟ್ಟಿಗೇಳಿಸಿ, ಅವರ ಶಿರಚ್ಛೇದನ ಮಾಡುವ ತಮ್ಮ ಆಲೋಚನೆಯಿಂದ ತೃಪ್ತರಾಗಿರುವರು. ತಮ್ಮ ಪ್ರೀತಿಯನ್ನು ಗಳಿಸಿ, ಠಾಣೆದಾರಹುದ್ದೆಯನ್ನು ಹೊಂದಬೇಕಾದ ಒಂದು ಕಾಂಕ್ಷೆ ಮಾತ್ರ ಇವರಲ್ಲಿ ಇನ್ನೂ ಬಾಕಿ ಉಳಿದಿರುವುದು. ಅದು ನೆರವೇರಿದರೆ ಈ ಮುಜುಮ್ದಾರರು ಕೃತಕೃತ್ಯರೇ ಸರಿ. (ಗಹಗಹಿಸಿ ವ್ಯಂಗ್ಯವಾಗಿ ನಗುವನು.)

**ಸುಲ್ತಾನ್:**—(ಮುಜುಮ್ದಾರನನ್ನು ಕುರಿತು ಕೋಪಗೊಂಡು) ಮುಜುಮ್ದಾರ್! ವಿಠೂಮಹಾರನ ಹೇಳಿಕೆಯು ನಿಜವೇ?

**ಮುಜು:**—(ಭೀತಿಯಿಂದ ತಡವರಿಸಿ) ಮಹಾಪ್ರಭೋ! ನಾನು . . . . ನಾನು . . . ಏನೂ ಅರಿಯೆ.

[ತೆರೆಯೊಳಗಿಂದ]

"ಸುಲ್ತಾನ್ ಬಾದಷಹರಿಗೆ ಜಯವಾಗಲಿ"

**ಸುಲ್ತಾನ್:**—ಏನು ಸಮಾಚಾರ?

[ತೆರೆಯೊಳಗಿಂದ]

"ಪಂಢರಪುರದ ಜೋಶಿ, ರಾಮದಾಸ ಇತ್ಯಾದಿಯವರು ಬಾದಷಹರ ದರ್ಶನಾರ್ಥವಾಗಿ ಬಂದಿರುವರು."

**ಸುಲ್ತಾನ್:**—ಅವರನ್ನು ಇಲ್ಲಿಗೆ ಬರಮಾಡು.

[ಜೋಶಿ, ರಾಮದಾಸ, ರಾಮಕೃಷ್ಣ ಭಟ್ಟ ಇತ್ಯಾದಿಯವರು ಪ್ರವೇಶಿಸುವರು.]

**ಜೋಶಿ ಇತ್ಯಾದಿಯವರು:**—ಸುಲ್ತಾನ್ ಬಾದಷಹರಿಗೆ ಎರಗುವೆವು.

**ಸುಲ್ತಾನ್:**—(ಎಲ್ಲರನ್ನೂ ದಿಟ್ಟಿಸಿ ನೋಡಿ) ನೀವು ಏಸು ಬಂದಿರಿ?

**ಜೋಶಿ:**—ಪ್ರಭೋ, ನಾವು ಕ್ಷಾಮದ ದೆಸೆಯಿಂದ ಸಾವನ್ನು ಕಾಣುತ್ತಿದ್ದೆವು. ಪ್ರಜಾಪರಿಪಾಲನೆಯೇ ರಾಜಧರ್ಮವೆಂದು ಬಗೆದು ಗುಣವಂತರಾದ ದಾಮಾಜಿಪಂತರು ಮಹಾಪ್ರಭುವಿನ ಅನುಮತಿಯನ್ನು ಹಿಂದಿನಿಂದ ಪಡೆಯುವ ನಿರೀಕ್ಷಣೆಯಿಂದ ಸರಕಾರಿ ಧಾನ್ಯಕೋಶದ ಧಾನ್ಯವನ್ನು ನಮಗೆಲ್ಲರಿಗೆ ಹಂಚಿದರು. ಹೀಗಿರಲು ತಾವು ಅವರನ್ನು ಬಂಧಿಸಿರುವುದು ವಿಹಿತವೇ? ಬರದಿಂದ ಸಾಯುವುದಾದರೂ ಸುಲಭವಿತ್ತು; ಮಹಾತ್ಮರಾದ ಅವರಿಗೊದಗಿದ ವಿಪತ್ತನ್ನು ನೋಡಿ ಬದುಕುವುದು ಕಷ್ಟವಾಗಿದೆ.

**ಸುಲ್ತಾನ್:**—ಆರ್ಯರೆ, ದಾಮಾಜಿಪಂತರನ್ನು ಬಂಧವಿಮುಕ್ತರನ್ನಾಗಿ ಮಾಡುವೆನು. ಅದಿರಲಿ. ಆಹಾರಕ್ಕಾಗಿ ಅವರನ್ನು ಮರೆಹೊಗುವಂತೆ ನಿಮಗೆ ಹೇಳಿಕೊಟ್ಟವರಾರು?

**ಜೋಶಿ:**—ಏಕೆ ಮಹಾಪ್ರಭೋ, (ಆಲೋಚಿಸಿ) ಠಾಣೆದಾರ ದಾಮಾಜಿ ಪಂತರಮೇಲಾಗಲೀ ಈ ಮುಜುಮ್ದಾರರಮೇಲಾಗಲೀ ಸನ್ನಿಧಾನದಿಂದ ಹೊರಿಸುವ ತಪ್ಪಿನ ಶಿಕ್ಷೆಗೆ ನಿಜವಾಗಿ ಕ್ಷಾಮಪೀಡಿತರಾದ ನಾವೇ ಬಾಧ್ಯರು.

**ವಿಠೂ:**—ಬಾದಷಹರೆ, ಈ ಮಾತಿನ ಸ್ವಾರಸ್ಯವನ್ನು ಗ್ರಹಿಸಿದಿರಾ?

**ಮುಜು:**—(ಭಯಗೊಂಡು) ಜೋಶಿಯವರೇ, ನನ್ನಮೇಲೆ ತಪ್ಪು ಹೊರಿಸಲು ನಾನು ಅನ್ಯಾಯಮಾಡಿರುವೆನೇ? ನಿಮಗೆಲ್ಲ ಧಾನ್ಯವನ್ನು ಕೊಟ್ಟುದು ಠಾಣೆದಾರರಲ್ಲವೇ?

**ಸುಲ್ತಾನ್:**—(ಕೋಪಗೊಂಡು ಮುಜುಮ್ದಾರನನ್ನು ಕುರಿತು) ಮುಜುಮ್ದಾರ್, ನ್ಯಾಯಾನ್ಯಾಯಗಳನ್ನು ನೀನು ರುಜುಪಡಿಸುವುದು ಅಗತ್ಯವಿಲ್ಲ. ನಡುವೆ ಬಾಯಿಹಾಕಿ ಮಾತನಾಡದಿರು! (ಜೋಶಿಯನ್ನು ಕುರಿತು) ಜೋಶಿಯವರೇ, ಸತ್ಯಶೋಧನೆಗಾಗಿ ನಾನು ನಿಮ್ಮನ್ನು ಪ್ರಶ್ನಿಸುವೆನಲ್ಲದೆ ಯಾರಿಗೂ ಯಾವ ತರದ ಶಿಕ್ಷೆಯನ್ನೂ ವಿಧಿಸುವುದಕ್ಕಲ್ಲ. ಅವಿವೇಕದಿಂದ ದಾಮಾಜಿಪಂತರನ್ನು ಬಂಧಿಸಿ ತರಲು ನಾನು ರಾಜಭಟರನ್ನು ಕಳುಹಿಸಿರುವುದೇನೋ ನಿಜ. ಆದರೆ ಅವರನ್ನೀಗಲೇ ಬಂಧವಿಮುಕ್ತರನ್ನಾಗಿ ಮಾಡುತ್ತೇನೆ. ದಾಮಾಜಿಪಂತರನ್ನು ಆಹಾರಸಾಮಗ್ರಿಗಾಗಿ ಆಶ್ರಯಿಸಲು ನಿಮಗೆ ಹೇಳಿಕೊಟ್ಟವನು ಈ ಮುಜುಮ್ದಾರನಲ್ಲವೇ?

**ಜೋಶಿ:**—ಅಹುದು. ಹಸಿವಿಂದ ನಾವು ಕಂಗೆಟ್ಟಿರುವುದನ್ನು ನೋಡಿ, ನಮ್ಮ ಬಗ್ಗೆ ಕನಿಕರಗೊಂಡು, ಈ ಮುಜುಮ್ದಾರರು ನಮಗೆ ಆ ಉಪಾಯವನ್ನು ಹೇಳಿಕೊಟ್ಟರು.

**ಸುಲ್ತಾನ್:**— ಪ್ರಜಾಜನರೆ, ರಾಜಕಾರ್ಯವು ತುಂಬಾ ಇದೆ. ಹೀಗಾದುದರಿಂದ ನೀವಿನ್ನು ಹೋಗಬಹುದು.

**ಜೋಶಿ ಇತ್ಯಾದಿಯವರು:**— ಮಹದಾಜ್ಞೆ. [ಹೋಗುವರು.]

**ಸುಲ್ತಾನ್:**— ಮುಜುಮ್ದಾರ್, ಈಗ ಏನು ಹೇಳುವೆ? ನಂಬಿಸಿ ನಂಬಿಸಿ ವಂಚಿಸುವ ನಿನ್ನಂತಹ ವಿಶ್ವಾಸಘಾತಕಿಗೆ— ಪಾತಕಿಗೆ ಈ ಲೋಕದಲ್ಲಿ ಸ್ಥಾನವಿದೆಯೇ? ದಾಮಾಜಿಪಂತರು ಧಾನ್ಯದ ಬೆಲೆಯನ್ನು ಕೊಟ್ಟು ಮರಣದಂಡನೆಯನ್ನು ತಪ್ಪಿಸಿಕೊಂಡರು. ನೀನು ಅಂತಹ ಶಿಕ್ಷೆಯಿಂದ ಹೇಗೆ ಪಾರಾಗುವೆ?

**ಮುಜು:**— (ಹೆದರಿಕೆಯಿಂದ ನಡುಗಿ) ಮಹಾಪ್ರಭೋ, . . . ನನ್ನದು ಸರ್ವಾಪರಾಧವಾಯಿತು. ನನ್ನನ್ನು ಕ್ಷಮಿಸಬೇಕು. [ಎರಗುವನು.]

**ಸುಲ್ತಾನ್:**— (ಕೋಪಗೊಂಡು) ನಿನ್ನ ತಲೆಯನ್ನು ಕಡಿಯುವುದೇ ನಿನಗೆ ತಕ್ಕುದಾದ ಕ್ಷಮಾಪಣೆಯು. ದಾಮಾಜಿಪಂತರ ಶಿರಚ್ಛೇದನವನ್ನು ನೋಡಿ ಹಿಗ್ಗಬೇಕೆಂದಿದ್ದೆಯಲ್ಲವೇ? ನಿನ್ನ ವಧೆಯನ್ನು ನೋಡಿ ದಾಮಾಜಿಪಂತರು ಮತ್ತು ಅವರ ಸೇವಕನಾದ ಈ ವಿಠೂಮಹಾರನು ಆನಂದಿಸಲಿ! (ಸೇನಾಪತಿಯನ್ನು ಕುರಿತು) ಸೇನಾಧೀಶರೇ, ಕಪಟಿಯಾದ ಈ ಮುಜುಮ್ದಾರನನ್ನು ಈಗಲೇ ಬಂಧಿಸಿ ಕಾರಾಗೃಹದಲ್ಲಿಡಿರಿ. ದಾಮಾಜಿಪಂತರು ಬಂದನಂತರ ಇವನಿಗೆ ಕೊಡತಕ್ಕ ಶಿಕ್ಷೆಯನ್ನು ಕುರಿತು ಆಲೋಚಿಸೋಣ.

**ಸೇನಾಪತಿ:**— ಮಹದಾಜ್ಞೆ.

**ವಿಠೂ:**— (ಮುಜುಮ್ದಾರನನ್ನು ಕುರಿತು) ಮುಜುಮ್ದಾರರೆ, ಎರಡನೆಯವನಿಗೆ ಬಗೆದ ಸೂಳು ತನಗೆ— ಗೊತ್ತಾಯಿತೇ?

**ಮುಜು:**— (ಬೇಸರದಿಂದ ತಲೆಯಾಡಿಸಿ) — ನಿಶ್ಚಯ.

[ಸೇನಾಪತಿಯು ಮುಜುಮ್ದಾರನ ಕೈಗೆ ಬೇಡಿ ಹಾಕಿ, ಅವನೊಂದಿಗೆ ಒಳಪ್ರವೇಶಿಸುವನು.]

**ವಿದೂಷಕ:**— (ಸ್ವಗತಂ) ಈ ವಿಠೂಮಹಾರನ ದೆಸೆಯಿಂದ ಮುಜುಮ್ದಾರರ ಗುಟ್ಟು ಚೆನ್ನಾಗಿ ರಟ್ಟಾಯಿತು. ಹೇಗೂ ಇರಲಿ. ಆ ಭಕ್ತಶಿಖಾಮಣಿ ದಾಮಾಜಿಪಂತರು ಬದುಕಿಕೊಂಡರಲ್ಲವೇ! ಅದೇ ಸಂತೋಷ.

**ಸುಲ್ತಾನ್:**— ವಿಠೂಮಹಾರ್, ಮುಜುಮ್ದಾರನಿಗೆ ಬಂದೀವಾಸವನ್ನು ವಿಧಿಸಿದುದು ಸರಿಯಾಯಿತಲ್ಲವೇ?

**ವಿಠೂ:**— ಬಾದಷಹರೆ, ಕೋಪಿಸದಿರಿ. ತಮ್ಮಂತಹ ರಾಜರು ನಿಷ್ಕರ್ಷಿಸುವ ಸರಿ — ತಪ್ಪುಗಳು ಎಷ್ಟೋ ಸರ್ತಿ ನ್ಯಾಯದ ಒರೆಯನ್ನು ಬಿಟ್ಟುಹೋಗುವುದರಿಂದ ಯದ್ವಾತದ್ವಾ ಆಗಿವೆ. ಇಲ್ಲದಿದ್ದರೆ ತಮ್ಮ ಸಂಸ್ಥಾನದ ಪ್ರಜೆಗಳು ಬರ

ದಿಂದ ಸಾವನ್ನು ಸಮೀಪಿಸುತ್ತಿರಲು ಅವರನ್ನು ರಕ್ಷಿಸಬೇಕಾಗಿದ್ದುದು ತಮ್ಮ ಕರ್ತವ್ಯವಿತ್ತಲ್ಲವೇ? ತಮ್ಮ ಪರವಾಗಿ ಆ ಕಾರ್ಯವನ್ನು ನನ್ನೊಡೆಯ ಠಾಣೆದಾರ ದಾಮಾಜಿಪಂತರು ನೆರವೇರಿಸಲು ತಾವು ಸಂತೋಷಗೊಳ್ಳಬೇಕಿತ್ತು. ಅದಕ್ಕೆ ಬದಲಾಗಿ ತಾವು ಅವರನ್ನು ಬಂಧಿಸುವುದೆಂದರೇನು—ಮರಣದಂಡನೆಯನ್ನು ವಿಧಿಸುವುದೆಂದರೇನು—ಧಾನ್ಯದ ಬೆಲೆಯನ್ನು ಅವರಿಂದ ಪಡೆದುಕೊಳ್ಳುವುದೆಂದರೇನು? ಒಂದುಲಕ್ಷದ ಅರುವತ್ತೆಂಟುಸಾವಿರ ರೂಪಾಯಿಯನ್ನು ಆ ಪುಣ್ಯಾತ್ಮರು ಕೊಟ್ಟುದರಿಂದ ಎಲ್ಲವೂ ಒಪ್ಪಾಯಿತು—ಇಲ್ಲದಿದ್ದರೆ ಎಲ್ಲವೂ ತಪ್ಪಾಗುತ್ತಿತ್ತಲ್ಲವೇ?

**ವಿದೂಷಕ:**—(ಸ್ವಗತಂ) ಬೆತ್ತವಿಲ್ಲದ ಪೆಟ್ಟು—ಹಗ್ಗವಿಲ್ಲದ ಕಟ್ಟು!

**ಸುಲ್ತಾನ್:**—ವಿಠೂಮಹಾರ್, ನನ್ನ ಮಾತಿನಿಂದಲೇ ನನ್ನನ್ನು ಕಟ್ಟಿ ಹಾಕಿದೆ. ನಿನ್ನ ಮಾತಿನಲ್ಲಿ ಒಂದಾದರೂ ತೆಗೆದುಬಿಸಾಡುವಂತಹುದಿಲ್ಲ. ದಾಮಾಜಿಪಂತರ ಹಣವು ನನಗೆ ಬೇಡ. ಅದನ್ನು ಅವರಿಗೆ ಮರಳಿಸುವೆನು. (ಆಲೋಚಿಸಿ) ಇರಲಿ. ನಿನ್ನ ರೂಪ, ವೇಷ, ನಡೆನುಡಿಗಳಿಗನುಗುಣವಾಗಿ ನೀನು ತಂದ ಆ ಹಣದ ಚೀಲವೂ ವಿಸ್ಮಯಕಾರಿಯಾಗಿರುವುದಲ್ಲ! ನಿಜವನ್ನು ಹೇಳು—ನೀನೇನು ಐಂದ್ರಜಾಲಿಕನೇ?

**ವಿದೂಷಕ:**—(ಸ್ವಗತಂ) ಆಶ್ಚರ್ಯ!—ಆಶ್ಚರ್ಯ! ಒಬ್ಬ ಹೊಲೆಯನು ರಾಜಸಭೆಗೆ ಬರುವುದೆಂದರೇನು? ಉದ್ಧಟತನವನ್ನು ತೋರುವುದೆಂದರೇನು? ಬೆರಗನ್ನುಂಟುಮಾಡುವುದೆಂದರೇನು?—ಕಲಿಕಾಲದ ಮಹಿಮೆಯೋ ಸರಿ.

**ವಿಠೂ:**—ಬಾದಷಹರೆ, ಐಂದ್ರಜಾಲಿಕನು ನಾನಲ್ಲ. ಆದರೆ ಸಮಯ ಬಂದರೆ ಇಂದ್ರಜಾಲವಲ್ಲ—ಮಹೇಂದ್ರಜಾಲದ ಪ್ರೌಢಿಮೆಯನ್ನೂ ನಾನು ಪ್ರದರ್ಶಿಸಬಲ್ಲೆ.

**ವಿದೂಷಕ:**—ಅದೇನು ಘನ? ನಾನಾದರೂ ಬ್ರಹ್ಮಜಾಲ, ವಿಷ್ಣುಜಾಲ, ಮಹೇಶ್ವರಜಾಲ—ಇನ್ನಾವ ಜಾಲವಪ್ಪಾ—ಸುಲ್ತಾನ್‌ಜಾಲವನ್ನೂ ತೋರಬಲ್ಲೆ!

**ಸುಲ್ತಾನ್:**—(ವಿದೂಷಕನನ್ನು ಕುರಿತು) ಮಿತ್ರಾ, ನಿಸ್ಸಾರವಾದ ಮಾತುಗಳನ್ನಾಡಿ ಫಲವೇನು? ಆ ಚೀಲದ ಬೆಡಗನ್ನು ಕಂಡೆಯಾ?

**ವಿದೂಷಕ:**—ಚೀಲದ ಬೆಡಗು ಅಂತಿರಲಿ. ಹಣದ ಬೆಡಗೇ ನನ್ನನ್ನು ಮೋಹಿಸುತ್ತಿರುವುದು.

**ವಿಠೂ:**—(ಅವಸರಗೊಂಡು) ಪಾವತಿಯೆಲ್ಲಿ?

**ಸುಲ್ತಾನ್:**— ವಿಠೂಮಹಾರ್, ತವಕಗೊಳ್ಳದಿರು. ದಾಮಾಜಿಪಂತರಿಗೆ ಪಾವತಿಯನ್ನು ನಾನು ಕಳುಹಿಸಿಕೊಡುವೆನು. ನಿನ್ನ ಬುದ್ಧಿವಂತಿಕೆಗೆ ಮರುಳಾಗಿದ್ದೇನೆ. ಇಂದಿನಿಂದ ನೀನು ಆ ದಾಮಾಜಿಯವರ ದೂತನಲ್ಲ— ನನ್ನ ಸ್ನೇಹಿತನು. ನನ್ನ ಸಖನಾಗಿ ಅರಮನೆಯ ಸುಖವನ್ನು ಅನುಭವಿಸು!

**ವಿದೂಷಕ:**—(ಸ್ವಗತಂ) ಎಲ್ಲಿಯ ಶನಿ ಬಂದಿತಪ್ಪಾ ಇದು! ಬಾದಷಹನ ಹಳೆಯ ಗೆಳೆಯನಾದ ನನ್ನ ಗತಿಯೇನಾಗುವುದೊ— ಕಾಣೆನಲ್ಲ.

**ವಿಠೂ:**—ಬಾದಷಹರೆ, ತಮ್ಮ ಸಖ್ಯವೂ ಬೇಡ— ಅರಮನೆಯ ಸುಖವೂ ಬೇಡ. ತಮ್ಮ ಗೆಳೆತನದಲ್ಲಿ ಹುರುಳಿಲ್ಲ. ಸರ್ವಗುಣಸಂಪನ್ನರಾದ ದಾಮಾಜಿಪಂತರ ಸೇವಾವೃತ್ತಿಯೇ ಆನಂದದಾಯಕವಾಗಿರುವುದು.

**ಸುಲ್ತಾನ್:**—ವಿಠೂ, ಅದೇಕೆ ಹಾಗೆ ಹೇಳುವೆ? ನನ್ನಲ್ಲಿ ದೋಷವೇನಿದೆ?

ಪದ ೭೧.

ರಾಗ: ಭೂಪ— ತ್ರಿವಟ

(ಪ್ರಮದೆಯರೆಸಿಪರು) ಎಂಬಂತೆ

ಬಯಸುವೆ ತವ ಸಖ್ಯವನು ನಾ ವಿಠೂ ।
ನಯದೊಳೆನ್ನ ಸ್ನೇಹಿತನೆನಿಸಿ ।
ಮೆರೆಯುವುದೈ ಸಖನೇ ॥ ಪ ॥

ಆ ದಾಮಾಜಿಯ ಭೃತ್ಯನೆನ್ನಿಸಿ ।
ಖೇದಗೊಳ್ಳಲೇಕೈ?— ಮನ್ನಿಸಿ ।
ಮೋದದೊಳಿರು ದಿಟದೆ ॥ ೧ ॥

**ವಿಠೂ:**—ಛೆಛೆ! ವ್ಯರ್ಥವಾಗಿ ನನ್ನನ್ನು ಕಾಡದಿರಿ. ಎಲ್ಲಿಯತನಕ ದಾಮಾಜಿಪಂತರ ನಿಷ್ಕಳಂಕವಾದ ಪ್ರೀತಿಯು ನನ್ನಮೇಲಿರುವುದೊ ಅಲ್ಲಿಯತನಕವೂ ನಾನು ಅವರನ್ನು ಹೊಂದಿಕೊಂಡಿರತಕ್ಕ ದಾಸನೇ ಸರಿ. ಅವರ ಅನುಮತಿಯಿಲ್ಲದೆ ನಾನು ತಮ್ಮ ಸಖನಾಗಲಾರೆ.

**ಸುಲ್ತಾನ್:**—ವಿಠೂ, ಹಾಗೆ ಮಾತಾಡಿ ನನ್ನ ಕಳವಳವನ್ನು ಹೆಚ್ಚಿಸಬೇಡ. ನನ್ನ ದಾಸನ ದಾಸನಾದ ನಿನಗೆ ನಾನು ದಾಸನಾಗುತ್ತೇನೆ. ಇದರಿಂದ ಹೆಚ್ಚಿನ ಭಾಗ್ಯವು ನಿನಗಾವುದು?

**ಸೇನಾಪತಿ:**—(ಸ್ವಗತಂ) ಆ ಪಿಶಾಚಿಯ ಮಾತುಕತೆಗಳಿಗೆ ಈ ಬಾದಷಹರು ಮರುಳಾಗಿರುವರಲ್ಲ! ಏನು ಹೇಳಬೇಕು?

**ವಿದೂಷಕ:**—(ಸ್ವಗತಂ) ಅಕಟಾ, ವಿಧಿಯೆ! ಬ್ರಾಹ್ಮಣಕುಲದಲ್ಲಿ ಹುಟ್ಟಿದರೂ ಹೊಟ್ಟೆಪಾಡಿಗಾಗಿ ಯವನನ ಸಂಗವನ್ನು ಮಾಡಿದೆನು. ಇನ್ನು ಹೊಲೆಯನ ಗೆಳೆತನವನ್ನೂ ಮಾಡುವ ಪ್ರಸಂಗ ಬರುವಂತಿದೆ. ಒಟ್ಟಾರೆ ಕಲಿಯುಗದ ಮಹಿಮೆ!

**ವಿಠೂ:**—ಬಾದಷಹರೆ, ಖಂಡಿತವಾಗಿ ಹೇಳುತ್ತೇನೆ. ತಮ್ಮ ಬಯಕೆಯನ್ನು ಈಡೇರಿಸಲು ನನಗೆ ಸಾಧ್ಯವಿಲ್ಲ. ಎಲ್ಲಿ ಪಾವತಿ?—ತೀವ್ರ ತೀವ್ರ ಕೊಡಿರಿ.

**ಮಂತ್ರಿ:**—ಇದೊ, ಪಾವತಿಯು ಇಲ್ಲಿರುವುದು. [ರಶೀದಿಯನ್ನು ವಿಠೂಮಹಾರನ ಕೈಗೆ ಕೊಡುವನು.]

**ವಿಠೂ:**—ಬಾದಷಹರೆ, ಅಪ್ಪಣೆಯಾಗಬೇಕು. ನಾನಿನ್ನು ಹೋಗಿ ಬರುವೆನು. [ಸರಸರನೆ ಹೋಗುವನು.]

**ಸುಲ್ತಾನ್:**—(ನಾಲ್ಕೂ ದಿಕ್ಕುಗಳನ್ನು ನೋಡಿ) ಹಾಯ್, ಹಾಯ್! ವಿಠೂಮಹಾರ್—ವಿಠೂಮಹಾರ್! ನೀನೆಲ್ಲಿ ಮಾಯವಾದೆ? [ಮೂರ್ಛಿತನಾಗುವನು. ಮಂತ್ರಿ, ಸೇನಾಪತಿಗಳು ಉಪಚರಿಸುವರು.]

[ಪರದೆ ಬೀಳುವುದು.]

## ದೃಶ್ಯ ೬.

[ಸುಲ್ತಾನ್ ಬಾದಷಹನ ಅಂತಃಪುರ. ಸುಲ್ತಾನನು ನೆಲದಮೇಲೆ ಕುಳಿತಿರುವನು.]

### ಪದ ೩೨.

ರಾಗ: ಭೈರವಿ—ಠುಂಬ್ರಿ

ಎಲ್ಲಿರುವೆಯೊ ವಿಠೂ ಹಾ । ವಿಠುರಾಯಾ ॥ ಪ ॥

ನಿನ್ನ ವಿಯೋಗದಿ । ಖಿನ್ನ ನಾನಾದೆ ।
ಮಾನ್ಯನೆ ಮುಖತೋ । ರೋ—ಬಾರೋ ॥ ೧ ॥

ಹಾ, ವಿಠೂ! ವಿಠೂಮಹಾರ್! ನೀನೆಲ್ಲಿ ಹೋದೆ? ಎಲ್ಲಿ ಮಾಯವಾದೆ? ಸಹಿಸೆನು—ನಿನ್ನ ಅಗಲುವಿಕೆಯಿಂದುಂಟಾದ ಈ ಹೃತ್ತಾಪವನ್ನು ಸಹಿಸೆನು! ನಿನ್ನ ಮೋಹನಾಕೃತಿ ಎಷ್ಟು ಸುಂದರ! ವಚನಗಳೆಷ್ಟು ಮಧುರ! ನಿನ್ನ ಕೃತಿಯಲ್ಲಿ ಎಷ್ಟು ಚಮತ್ಕಾರ! ನನ್ನ ಭೃತ್ಯನ ಭೃತ್ಯನಾದ ನಿನಗೆ ನನ್ನ ವಿಷಯದಲ್ಲಿ ತಾತ್ಸಾರಬುದ್ಧಿಯೇಕೆ? ನನ್ನ ಬಿನ್ನಹವನ್ನು ತಿರಸ್ಕರಿಸಿದೆ ಏಕೆ? ನಾನೇನು ದುಷ್ಟನೇ?—ಅಹುದು. ನಾನು ಮಹಾದುರ್ಗುಣಿಯು. ಪಾಷಾಣಹೃದ

ಯನು. ನನ್ನ ಪ್ರಾಂತದ ಜನರೇ ಕ್ಷಾಮಕ್ಕೀಡಾಗಿ ಮೃತ್ಯುವಿಗೆ ತುತ್ತಾಗುತ್ತಿರಲು ಅವರನ್ನು ರಕ್ಷಿಸಬೇಕಾದ ನನ್ನ ಕರ್ತವ್ಯವನ್ನು ಕೈಕೊಂಡೆನೇ? ಇಲ್ಲ. ನನ್ನ ಪರವಾಗಿ ತತ್ಕಾರ್ಯವನ್ನು ದಾಮಾಜಿಪಂತರು ನೆರವೇರಿಸಿದ್ದರೂ ಆ ಕಪಟಿ ಮುಜುವುದ್ದಾರನ ಚಾಡಿಮಾತುಗಳಿಗೆ ಕಿವಿಗೊಟ್ಟು ದಾಮಾಜಿಯವರ ತಲೆಯನ್ನು ಕಡಿಯುವ ದುರಾಲೋಚನೆಯನ್ನು ಗೈದೆನು. ನಾನು ಪಾಪಿ ಅಹುದು. ವಿಠೂ ಮಹಾರ್, ಇದಕ್ಕಾಗಿ ಕೋಪಿಸದಿರು. ಬಾ, ಬಾ — ವಿಠೂಮಹಾರ್ — ವಿಠೂ.

[ಚಾರನೊರ್ವನು ಪ್ರವೇಶಿಸುವನು.]

**ಚಾರ:** — (ಕೈಮುಗಿದು) ಮಹಾಪ್ರಭೋ, ಆಸ್ಥಾನದಲ್ಲಿ ಮಂತ್ರಿಸೇನಾಪತಿಗಳು ತಮ್ಮ ಆಗಮನವನ್ನು ಇದಿರುನೋಡುತ್ತಿರುವರು.

**ಸುಲ್ತಾನ್:** — (ಚಾರನ ಬಳಿಸಾರ್ದು ಆಲಿಂಗಿಸಲು ಯತ್ನಿಸಿ) ಬಾ, ವಿಠೂ — ನನ್ನ ವಿಠೂಮಹಾರ್! ಸ್ನೇಹಿತನನ್ನು ಆಲಿಂಗಿಸು.

**ಚಾರ:** — (ಆಶ್ಚರ್ಯಗೊಂಡು ಸ್ವಗತಂ) ಇದೇನು? ಇವರಿಗೆ ಆ ವಿಠೂ ಮಹಾರನ ಹುಚ್ಚೇ ತಗಲಿರುವುದಲ್ಲ! (ಪ್ರಕಾಶಂ) ಪ್ರಭೋ, ನಾನು ವಿಠೂ ಮಹಾರನಲ್ಲ.

**ಸುಲ್ತಾನ್:** — ಹಾಗೆ ವಂಚಿಸಬೇಡಾ — ನೀನೇ ವಿಠೂಮಹಾರನು — ಹೊಲೆಯನು — ದಾಮಾಜಿಯವರ ಹಣವನ್ನು ತಂದ ದೂತನು! [ಚಾರನನ್ನು ಆಲಿಂಗಿಸುವನು.]

**ಚಾರ:** — ಮಹಾಪ್ರಭೋ, ನಾನು ತಮ್ಮ ಸೇವಕನಲ್ಲವೇ? (ಸ್ವಗತಂ) ಇವರಿಗೆ ಖಂಡಿತವಾಗಿ ಬುದ್ಧಿಭ್ರಮಣವಾಗಿರುವುದು. ಇನ್ನು ನಾನಿಲ್ಲಿ ನಿಲ್ಲುವುದು ಯುಕ್ತವಲ್ಲ.

[ಸುಲ್ತಾನನ ಕೈಯಿಂದ ತಪ್ಪಿಸಿ ಚಾರನು ಓಡಿಹೋಗುವನು.]

[ಪರದೆ ಬೀಳುವುದು.]

## ದೃಶ್ಯ ೭.

[ರಾಜಾಸ್ಥಾನ. ಮಂತ್ರಿ, ಸೇನಾಪತಿ, ಕೋಶಾಧ್ಯಕ್ಷರು ಮಂಡಿಸಿರಲು, ಸುಲ್ತಾನನು ಪ್ರವೇಶಿಸುವನು. ಎಲ್ಲರೂ ಎದ್ದು ನಿಲ್ಲುವರು.]

**ಸುಲ್ತಾನ್:** — (ಉನ್ಮಾದಾವಸ್ಥೆಯಲ್ಲಿ) ಎಲ್ಲಿ? ವಿಠೂ ಎಲ್ಲಿ? ನನ್ನ ವಿಠೂ ಮಹಾರನೆಲ್ಲಿ? ಅವನು ಕಾಣಿಸುವುದಿಲ್ಲವೇಕೆ? ಎಷ್ಟು ಕೂಗಿದರೂ, ಪ್ರಲಪಿಸಿದರೂ ಕಾಣಲೊಲ್ಲನೇಕೆ?

**ಮಂತ್ರಿ:**—(ಸ್ವಗತಂ) ಒಬ್ಬ ಹೊಲೆಯನ ದೆಸೆಯಿಂದ ಇವರು ಮರುಳಾಗಿರುವರಲ್ಲ! ಇದರಿಂದ ಬೇರೆ ಆಶ್ಚರ್ಯವೇನು?

**ಸೇನಾಪತಿ:**—(ಸ್ವಗತಂ) ಮೋಹಕ್ಕೆ ಬಲಿಬೀಳಲು ಆ ಹೊಲೆಯನೇನು ಸ್ತ್ರೀಯಲ್ಲ. ಅಯ್ಯೋ! ಇವರ ಉನ್ಮಾದಾವಸ್ಥೆಯೇ!

**ಸುಲ್ತಾನ್:**—ವಿಠೂ, (ಗಹಗಹಿಸಿ ನಕ್ಕು) ನಿನ್ನ ಬೆಡಗಿನ ಆ ಚೀಲವನ್ನು ಇತ್ತುಕೊಡು. ಪಾವತಿ ಒಂದಲ್ಲ—ಹತ್ತುಸಾವಿರ ಕೊಡುವೆನು. ಬೇಡಾ! ಹಣವು ಬೇಡಾ! ನಿನ್ನ ಸ್ನೇಹ ಬೇಕು. ನಿನ್ನ ಆಲಿಂಗನ ಬೇಕು. ಬಾ, ಬಾ.

[ಮೂರ್ಛೆಬೀಳುವನು. ಮಂತ್ರಿ, **ಸೇನಾಪತಿಗಳು** ಶೈತ್ಯೋಪಚಾರಮಾಡಲು ಚೇತರಿಸಿಕೊಂಡು ಏಳುವನು.]

**ಮಂತ್ರಿ:**—ಪ್ರಭೋ, ಶಾಂತರಾಗಿರಿ.

**ಸುಲ್ತಾನ್:**—(ಸುತ್ತಲೂ ನೋಡಿ ಅಚ್ಚರಿಯಿಂದ) ಏನು—ನಾನು ನಿದ್ರಾವಸ್ಥೆಯಲ್ಲಿದ್ದೆನೇ? ಇಲ್ಲ. ಜಾಗ್ರತಾವಸ್ಥೆಯಲ್ಲೇ ಇರುವೆನು. ಹೀಗಿರಲು ಅಂತಃಪುರದಲ್ಲಿದ್ದ ನಾನು ಇಲ್ಲಿಗೆ ಹೇಗೆ ಬಂದೆನು?

[ದಾಮಾಜಿಪಂತನನ್ನೊಡಗೊಂಡು ರಾಜಭಟರು ಪ್ರವೇಶಿಸುವರು.]

**೨ನೆಯ ರಾಜಭಟ:**—ಪ್ರಭೋ, ದಾಮಾಜಿಪಂತರನ್ನು ಬಂಧಿಸಿ ತಂದಿರುವೆವು.

**ಸುಲ್ತಾನ್:**—(**ಕೋಪಗೊಂಡು**) ಥೂ, ಪಾಷಂಡ! ದಾಮಾಜಿಪಂತರ ಬಂಧನವನ್ನು ಈಗಲೇ ಬಿಡಿಸು.

[ರಾಜಭಟರು ದಾಮಾಜಿಪಂತನ ಬಂಧನವನ್ನು ಬಿಡಿಸುವರು.]

**ಸುಲ್ತಾನ್:**—ದಾಮಾಜಿಪಂತರೇ, ವಿಠೂಮಹಾರನೆಲ್ಲಿ?—ಬೇಗ ಹೇಳಿರಿ.

**ದಾಮಾಜಿ:**—(ಆಶ್ಚರ್ಯಗೊಂಡು) ಯಾವ ವಿಠೂಮಹಾರನು? ನಾನರಿಯೆನಲ್ಲ.

**ಸುಲ್ತಾನ್:**—ಏಕೆ ಹಾಗೆ ಮಾತಾಡುವಿರಿ? ನಿಮ್ಮ ಸೇವಕನಾದ ವಿಠೂಮಹಾರನು! ಧಾನ್ಯದ ಮೌಲ್ಯವನ್ನು ನನ್ನೆಡೆಗೆ ತಂದ ನಿಮ್ಮ ದೂತನು!!

**ದಾಮಾಜಿ:**—(ಸ್ವಗತಂ) ಇವರು ಅಬದ್ಧವಾದ ಮಾತುಗಳನ್ನಾಡುವರಲ್ಲ! ಧಾನ್ಯದ ಮೌಲ್ಯವಿತ್ತವನಂತೆ—ನನ್ನ ಸೇವಕನಂತೆ—ವಿಠೂಮಹಾರನಂತೆ—ಏನೊ ನಾನರಿಯೆ. (ಪ್ರಕಾಶಂ) ಪ್ರಭೋ, ಪರಿಹಾಸ್ಯಮಾಡುವಿರಾ? ನಾನು

ವ್ಯಯಗೊಳಿಸಿದ ಅಪಾರಧಾನ್ಯದ ಕ್ರಯವನ್ನು ಕೊಡುವ ಯೋಗ್ಯತೆಯು ನನಗಿಲ್ಲವಲ್ಲ!

**ಸುಲ್ತಾನ್:**— ದಾವಾಜಿಯವರೇ, ನನ್ನನ್ನು ಹಂಗಿಸಬೇಡಿರಿ. ಸಾಧುವೂ ನಿರಪರಾಧಿಯೂ ಆದ ನಿಮಗೆ ಅಪಮಾನಗೊಳಿಸಿದೆನು. ನೀವು ತೊಂದರೆಗೀಡಾಗುವಂತೆ ಮಾಡಿದೆನು. ನನ್ನ ಅಪರಾಧವನ್ನು ಕ್ಷಮಿಸಿರಿ. ವಿಠೂಮಹಾರನು ಮಂಗಳವೇಢೆಯಲ್ಲಿರುವನೇ? ಹೇಳಿರಿ.

**ದಾವಾಜಿ:**— ಸತ್ಯವನ್ನೇ ಹೇಳುತ್ತೇನೆ. ವಿಠೂಮಹಾರನ ಪರಿಚಯವೇ ನನಗಿಲ್ಲ.

**ಸುಲ್ತಾನ್:**— ದಾವಾಜಿಯವರೇ, ನೀವು ಪ್ರಾಮಾಣಿಕರೆಂದು ಭಾವಿಸಿದ್ದೆನು. ಆದರೆ ಈಗ ನೋಡಿದರೆ ಆ ಅಭಿಪ್ರಾಯವನ್ನು ಬದಲಾಯಿಸಬೇಕಾಗಿರುವುದು. (ಕಿಸೆಯೊಳಗಿಂದ ಪತ್ರತೆಗೆದು ದಾವಾಜಿಪಂತನಿಗೆ ತೋರಿಸಿ) ದಾವಾಜಿಯವರೇ, ಹೇಳಿರಿ— ಇದು ನಿಮ್ಮ ಸ್ವಹಸ್ತಾಕ್ಷರದ ಪತ್ರವಲ್ಲವೇ?

**ದಾವಾಜಿ:**— (ಪತ್ರವನ್ನು ತೆಗೆದುಕೊಂಡು ನೋಡಿ ವಿಸ್ಮಯಗೊಂಡು ಸ್ವಗತಂ) ನನಗೆ ಬೇರೆ ಬುದ್ಧಿಭ್ರಮಣವಾಗಿಲ್ಲವಷ್ಟೆ! ಈ ಲಿಖಿತವು ಸಂಪೂರ್ಣವಾಗಿ ನನ್ನ ಕೈಬರಹದಂತಿರುವುದಲ್ಲ! (ಪ್ರಕಾಶಂ) ಪ್ರಭೋ, ಈ ಪತ್ರದ ಬರಹವೂ ಸಹಿಯೂ ನನ್ನನ್ನು ಮರುಳುಗೊಳಿಸುತ್ತಿರುವುವು. ಈ ಲಿಖಿತವು ನಾನು ಬರೆದಂತಿದ್ದರೂ ಇದನ್ನು ಬರೆದವನು ಮಾತ್ರ ನಾನಲ್ಲ. (ಓದಿನೋಡಿ) ಇದರೊಳಗಿನ ವಿಷಯವೂ ಆಶ್ಚರ್ಯಜನಕವಾಗಿರುವುದು. ಸೇವಕನನ್ನಾಗಲೀ ಹಣವನ್ನಾಗಲೀ ನಾನು ಕಳುಹಿಸಿಕೊಟ್ಟುದೇ ಇಲ್ಲ. ಇದರಲ್ಲಿ ಹೇಳಿರುವ ಹಣವು ನಿಮಗೆ ಬಂದಿರುವುದೇ?

**ಸುಲ್ತಾನ್:**— ಆಗಲೇ ಬಂದಿರುವುದು. ಆ ಹಣವನ್ನು ತಂದ ನಿಮ್ಮ ದೂತನ ವಿಷಯವನ್ನೇ ನಾನು ನಿಮ್ಮೊಡನೆ ವಿಚಾರಿಸಿದುದು. ಹೇಳಿರಿ— ನಿಮ್ಮ ಆ ಭೃತ್ಯನ, ವಿಠೂಮಹಾರನ ವಿಚಾರವನ್ನು ಹೇಳಿರಿ. (ಹೆಚ್ಚಿನ ಉನ್ಮಾದಾವಸ್ಥೆಯನ್ನು ತೋರಿ) ಹಾ, ವಿಠೂಮಹಾರ್! ವಿಠೂ!! ಬಾ, ನನ್ನನ್ನು ಆಲಿಂಗಿಸಿಕೊಳ್ಳು! ಚಮತ್ಕಾರವಾಗಿ ಮಾತನಾಡು! [ಧೊಪ್ಪನೆ ನೆಲದಮೇಲೆ ಬೀಳುವನು. ಮಂತ್ರಿ ಸೇನಾಪತಿಗಳು ಶೈತ್ಯೋಪಚಾರಮಾಡುವರು.]

**ಮಂತ್ರಿ:**— ದಾವಾಜಿಯವರೇ, ನಿಮ್ಮ ಸೇವಕ ವಿಠೂಮಹಾರನಮೇಲಣ ಮೋಹದಿಂದ ಬಾದಷಹರು ಉನ್ಮತ್ತರಾಗಿರುವರು. ಅದುಕಾರಣ ಇನ್ನೂ ವಿಳಂಬಮಾಡದೆ ಆ ಭೃತ್ಯನನ್ನು ಇಲ್ಲಿಗೆ ಬರಮಾಡಿರಿ.

**ದಾಮಾಜಿ:**—ಮಂತ್ರಿವರ್ಯರೇ, ವಿಷಯವು ಆಶ್ಚರ್ಯಕರವಾಗಿದೆ. ವಿಠೂಮಹಾರನೆಂಬ ಹೆಸರಿನ ಸೇವಕನೇ ನನಗಿಲ್ಲ. (ಸ್ವಗತಂ) ಆಹಾ! ನನ್ನ ಬಗ್ಗೆ ಇಂತಹ ಅದ್ಭುತಕಾರ್ಯಗಳನ್ನು ನೆರವೇರಿಸಿದ ಆ ವಿಠೂಮಹಾರನೆಂಬವನು ಯಾರಿರಬಹುದು? ಅಪಾರದ್ರವ್ಯವನ್ನು ಬಾದಷಹರಿಗೆ ಸಲ್ಲಿಸಿರುವುದರಿಂದ ಅವನು ಧನಿಕನೇ ಸರಿ. ನನ್ನ ಹಸ್ತಾಕ್ಷರವನ್ನು ಹೋಲುವ ಪತ್ರಬರೆದಿರುವುದ ರಿಂದ ಅವನು ಚತುರನೇ ಸರಿ. ಬಾದಷಹರನ್ನು ತನ್ನ ಮೋಹದ ಬಲೆಗೆ ಸೆಳೆ ದುದರಿಂದ ಅವನು ಅಪ್ರತಿಮಸಾಹಸಿಯೇ ಸರಿ. ಇಂತಹ ಧನಿಕನೂ, ಚತು ರನೂ, ಸಾಹಸಿಯೂ ಯಾರಿರಬಹುದು? (ಚಿಂತಿಸಿ) ನನ್ನ ವಿಠೋಬನಾಗಿರ ಬಹುದೇ? ಸರಿ, ಸರಿ. ವಿಠೋಬನೇ ಹೊಲೆಯನ ವೇಷತಾಳಿದ ಕಾರಣ "ವಿಠೂ ಮಹಾರ"ನೆಂಬ ಹೆಸರಿಟ್ಟುಕೊಂಡು ಮನುಷ್ಯಮಾತ್ರದವನಿಗೆ ಅಸಾಧ್ಯವಾದ ಇಂತಹ ಚಮತ್ಕೃತಿಯನ್ನೆಸಗಿದನು. ಹೇ ಜಗದೀಶ್ವರಾ! ವಿಠೋಬಾ!! ಪಾಂಡು ರಂಗಾ!!! ನಿನ್ನ ಭಕ್ತವಾತ್ಸಲ್ಯವನ್ನು ಏನೆಂದು ಕೊಂಡಾಡಲಿ!

### ಪದ ೩೩.

ರಾಗ: ಮಿಶ್ರಬೇಹಾಗ್—ದಾದರಾ

ಹಾ ಹೊಲೆಯನಾದೆಯೇನು । ಸುರೇಶನಾದ ನೀನು ॥ ಪಲ್ಲ ॥
ದೇವದೇವ, ಭಕ್ತರಲ್ಲಿ । ಪ್ರೇಮವೆನಿತೊ ನಿನಗೆ ॥ ಅ. ಪ. ॥

ಅಪಾರಧನವ ಸಲಿಸಿ, । ನರೇಶನ ಸಂತೈಸಿ, ।
ತೋರ್ದೆ ಪ್ರೀತಿ, ನಿನ್ನ ರೀತಿ, । ತಿಳಿದು ಚಕಿತನಾದೆ ॥ ೧ ॥

ವಿಠೋಬಾ! ಸಂಕೋಚವಿಲ್ಲದೆ ವಿಠೂಮಹಾರನೆಂದಾದೆಯಾ? ನಿನ್ನ ಭಕ್ತ ನಾದ ನನಗೆ ತೋರದಿರುವ ನಿನ್ನ ರೂಪಲಾವಣ್ಯಗಳನ್ನು ನನಗೋಸ್ಕರವಾಗಿ ಈ ಬಾದಷಹರಿಗೆ ತೋರಿಸಿದೆಯಾ? ಪಂಢರೀನಾಥಾ! ನಿನ್ನ ಮಾತಿನ ಚಾತ್ಮೆ ಯನ್ನು ಕಿವಿಯಾರೆ ಕೇಳಿ ಆನಂದಿಸುವ ಯೋಗವನ್ನು ನಿನ್ನ ದಾಸನಾದ ನನಗೆ ಕರುಣಿಸಿಲ್ಲವಾದರೂ ನನ್ನ ಬಗ್ಗೆ ಅಂತಹ ಸುಯೋಗವನ್ನು ಇವರಿಗೆ ಒದಗಿಸಿದೆಯಲ್ಲವೇ? ನಿನ್ನ ಭಕ್ತವಾತ್ಸಲ್ಯವು ತದ್ಭಕ್ತಸಂಬಂಧದಿಂದ ಇತರರಿಗೂ ಉಪಕಾರಿಯಾಗುವುದಲ್ಲವೇ? ವಿಶ್ವಧಾರಿಯೂ, ವಿಶ್ವವ್ಯಾಪಕನೂ, ವಿಶ್ವಪಾಲ ಕನೂ ಆದ ನಿನ್ನ ರೂಪಲಾವಣ್ಯ, ಮಾತುಕತೆಗಳಿಂದ ಈ ಸುಲ್ತಾನ್ ಬಾದ

ಷಹರು ಕೂಡ ಆಕೃಷ್ಟರಾಗಿ ನಿನ್ನನ್ನು ಕುರಿತು ಹುಚ್ಚುತಾಳಿರುವುದರಲ್ಲಿ ಆಶ್ಚರ್ಯವಿಲ್ಲ.

[ಸುಲ್ತಾನ್ ಬಾದಷಹನು ಚೇತರಿಸಿಕೊಂಡು ಏಳುವನು.]

**ದಾಮಾಜಿ:**—ಪ್ರಭೋ, ಆಲೋಚಿಸಿ ನೋಡಿದೆನು. ಪಂಢರಪುರದ ವಿಠೋಬನೇ ವಿಠೂಮಹಾರನೆಂಬ ಹೆಸರಿನಿಂದ ನನಗೋಸ್ಕರವಾಗಿ ನಿಮಗೆ ಧಾನ್ಯದ ಕ್ರಯವನ್ನು ತೆತ್ತನು.

**ಸುಲ್ತಾನ್:**—ಪಂಢರಪುರದ ವಿಠೋಬನು ಶಿಲಾಪ್ರತಿಮೆಯಲ್ಲವೇ?

**ದಾಮಾಜಿ:**—ಅಹುದು.

**ಸುಲ್ತಾನ್:**—ಎಂದಮೇಲೆ ಕಲ್ಲಿನ ಗೊಂಬೆಯು ಮನುಷ್ಯರೂಪವನ್ನು ತಾಳುವ ಬಗೆ ಹೇಗೆ?

**ದಾಮಾಜಿ:**—ಪ್ರಭೋ, ವಿಶ್ವಾಸವೇ ಫಲದಾಯಕವಾಗಿರುವುದು. ಜಡವಾದ ಶಿಲಾಮೂರ್ತಿಯನ್ನು ಪರಮಾತ್ಮಭಾವನೆಯಿಂದ ಆರಾಧಿಸಿದರೆ ಅದು ಚೇತನವನ್ನು ಹೊಂದಿ ವಿಶ್ವವನ್ನೇ ನಮ್ಮ ಕೈಗೆ ಕೊಡಬಲ್ಲುದು. ದೇವರಿಲ್ಲದ ಠಾವು ಉಂಟೇ? ನಮ್ಮ ಭಕ್ತಿಯೇ ಶಕ್ತಿಗೂ ಮುಕ್ತಿಗೂ ಕಾರಣವಾಗಿರುವುದು.

**ಸುಲ್ತಾನ್:**—ದಾಮಾಜಿಪಂತರೇ, ಏನೇ ಇರಲಿ. ನೀವು ಹೇಳುವಲ್ಲಿಗೆ ನಾನು ಬರುವೆನು. ನನಗೆ ವಿಠೂಮಹಾರನ ಭೇಟಿಮಾಡಿಸುವ ಭಾರವು ನಿಮ್ಮದಾಗಿದೆ. ವಿಠೂಮಹಾರನನ್ನು ಕಾಣುವ ತವಕದಲ್ಲಿ ನನ್ನ ಹೃದಯವು ತಳಮಳಿಸುತ್ತಿರುವುದು; ಮನಸ್ಸು ಕಳವಳಿಸುತ್ತಿರುವುದು. ಅವನನ್ನು ನೀವು ತೋರಿಸಲು ತಪ್ಪಿದರೆ, ನಾನು ಎಲ್ಲವನ್ನೂ ನೀಗಿ ಖಂಡಿತವಾಗಿ ಸಾಯುವೆನು. (ತೆರೆಯ ಕಡೆ ನೋಡಿ) ವಿಠೂ, ವಿಠೂಮಹಾರ್—ಎಲ್ಲಿ ಅಡಗಿರುವೆ? ಬಾ!

**ದಾಮಾಜಿ:**—ಪ್ರಭೋ, ಶಾಂತರಾಗಿರಿ. ಈಗಲೇ ಪಂಢರಪುರಕ್ಕೆ ಹೋಗೋಣ. ವಿಠೂಮಹಾರನು ಅಲ್ಲಿ ದೇವಾಲಯದಲ್ಲಿರುವನು.

**ಸುಲ್ತಾನ್:**—ದಾಮಾಜಿಯವರೇ, ಹಾಗಾದರೆ ಅಂತಃಪುರಕ್ಕೆ ಹೋಗಿ ಅಲ್ಲಿಂದ ತೀವ್ರ ಪಂಢರಪುರಕ್ಕೆ ಹೊರಡೋಣ.

**ದಾಮಾಜಿ:**—ಹಾಗೆಯೇ ಆಗಲಿ.

[ಹೋಗುವರು.]

[ಘರದೆ ಬೀಳುವುದು.]

## ದೃಶ್ಯ ೮.

[ರಾಜವೀಥಿಯಲ್ಲಿ ಮುಜುಮ್ದಾರನು ಪ್ರವೇಶಿಸುವನು.]

**ಮುಜು:**— ಅಕಟಾ! ನಾನೆಂತಹ ವಿಪರೀತಾವಸ್ಥೆಗೆ ಗುರಿಯಾದೆನು! ಠಾಣೆದಾರಹುದ್ದೆಯನ್ನು ಸಂಪಾದಿಸಲು ಯತ್ನಿಸಿ, ಇದ್ದ ಕೆಲಸವನ್ನೂ ಕಳೆದು ಕೊಂಡೆನು. ಪುಣ್ಯಾತ್ಮರಾದ ಆ ದಾಮಾಜಿಪಂತರು ನಾನು ಅವರಿಗೆ ಮಾಡಿದ ಅಪಕಾರವನ್ನೆಣಿಸದೆ ನನಗೆ ಉಪಕಾರವನ್ನೇ ಬಗೆದುದರಿಂದ ಸುಲ್ತಾನ್ ಬಾದಷಹರ ಬಾಯಿಯಿಂದ ಹೇಗಾದರೂ ಬದುಕಿಕೊಂಡೆನು. ಅವರು ನನ್ನ ಬಗ್ಗೆ ವಾದಿಸದಿರುತ್ತಿದ್ದರೆ ಕಾರಾಗೃಹವಾಸವಂತು ತಪ್ಪುತ್ತಿದ್ದಿಲ್ಲ — ಮರಣದಂಡನೆಯೂ ನನಗೆ ಗತಿಯಾಗುತ್ತಿತ್ತೊ ಏನೊ! ಅತಿ ಆಸೆ ಗತಿಗೇಡು— ಬೇರೆಯವರಿಗೆ ಬಗೆದ ಸೂಳು ತನಗೆ—ಎಂಬ ಬುದ್ಧಿ ಕೆಟ್ಟಮೇಲಾದರೂ ನನಗೆ ಬಂತಲ್ಲವೇ?

[ವ್ಯಸನದಿಂದ ಹೋಗುವನು.]

## ದೃಶ್ಯ ೯.

[ಪಂಢರಪುರದೇವಾಲಯ. ಬಾದಷಹನನ್ನೊಡಗೊಂಡು ದಾಮಾಜಿಪಂತನು ಪ್ರವೇಶಿಸುವನು.]

**ಸುಲ್ತಾನ್:**— ದಾಮಾಜಿ, ವಿಠೂ ಎಲ್ಲಿ? ಇದು ಕಲ್ಲಿನ ಮೂರ್ತಿ.

**ದಾಮಾಜಿ:**— ಪ್ರಭೋ, ಸ್ವಲ್ಪ ನಿಧಾನಿಸಬೇಕು. ವಿಠೂಮಹಾರನ ರೂಪವನ್ನು ತಾಳುವಂತೆ ಈ ವಿಠೋಬಮೂರ್ತಿಯನ್ನು ಪ್ರಾರ್ಥಿಸುವೆನು.

**ಸುಲ್ತಾನ್:**— ಆಸ್ಥಾನಕ್ಕೆ ಬಂದ ಮನುಷ್ಯರೂಪವನ್ನು ತಾಳಿ ನನ್ನನ್ನು ಚೆನ್ನಾಗಿ ಆಲಿಂಗಿಸುವಂತೆ ಪ್ರಾರ್ಥಿಸಲು ಮರೆಯಬೇಡಿರಿ.

**ದಾಮಾಜಿ:**— ಅಚೇತನವಾಗಿರುವ ಈ ಮೂರ್ತಿಯು ಚೇತನಾರೂಪದಿಂದ ಪ್ರಕಟವಾಗಲು ಬಿನ್ನವಿಸುವೆನು.

### ಪದ ೩೪.

ರಾಗ: ಪೂರ್ವಿ—ತ್ರಿವಟ
(ದಿನಮಣಿ ಮರೆಯಾ) ಎಂಬಂತೆ

ದೇವ ರಮಾಧವ, | ಸುಜನೈಕಬಾಂಧವ, |
ಪಾವನ, ಭೂದೇ | ವೀಧವ, ಮಾಧವ |
ವಿಠುರೂಪವ ತಾಳೈ || ಪಲ್ಲ ||

ಸಿರಿಯುರಸನೆ ತವ । ವಿರಹದಿ ಬಳಲಿ ।
ನರಪತಿಯಧಿಕದಿ । ತರಹರಿಸುವನೈ ।
ಧರಿಸ್ಯೆ ನವವೇಷ ॥ ೧ ॥

[ವಿಠಲಮೂರ್ತಿಯು ಮಾಯವಾಗಿ ವಿಠೂಮಹಾರನು ಪ್ರತ್ಯಕ್ಷನಾಗುವನು.]

**ವಿಠೂ:**—ದಾಮಾಜಿ, ನೀನು ನನ್ನ ಭಕ್ತನಾಗಿರುವುದರಿಂದ ನನ್ನ ಅನುಗ್ರಹಕ್ಕೆ ಪಾತ್ರನಾಗಿರುವೆ. ನಿನ್ನ ಬಗ್ಗೆ ಈ ಸುಲ್ತಾನ್ ಬಾದಷಹನಿಗೆ ಈ ವಿಠೂಮಹಾರನ ವೇಷದಲ್ಲಿ ಧಾನ್ಯದ ಮೌಲ್ಯವನ್ನು ಸಲ್ಲಿಸಿದವನು ನಾನೇ.

**ದಾಮಾಜಿ:**—ದೇವಾ, ನಿನ್ನ ಭಕ್ತವಾತ್ಸಲ್ಯವನ್ನು ಎಷ್ಟು ಕೊಂಡಾಡಿದರೂ ಕಡಮೆಯೇ.

**ವಿಠೂ:**—(ಬಾದಷಹನನ್ನು ಕುರಿತು) ಬಾದಷಹನೆ, ನನ್ನಮೇಲಣ ಮೋಹಧಿಂದ ಉನ್ಮತ್ತನಾಗಿದ್ದೆಯಲ್ಲವೇ? ಈಗ ನನ್ನನ್ನು ಚೆನ್ನಾಗಿ ನೋಡು.

**ಸುಲ್ತಾನ್:**—ಲೋಕೇಶಾ! ಸಾಮಾನ್ಯನಾದ ಹೊಲೆಯನೆಂದು ಭಾವಿಸಿ ರಾಜಸಭೆಯಲ್ಲಿ ನಾವು ನಿನ್ನನ್ನು ಹೀನಿಸಿದೆವು. ನೀನು ನಮ್ಮ ಎಲ್ಲಾ ತಪ್ಪುಗಳನ್ನು ಕ್ಷಮಿಸಬೇಕು. ನಿನ್ನ ದರ್ಶನದಿಂದ ನನ್ನ ಹೃತ್ತಾಪವು ದೂರವಾಯಿತು. ನಿನ್ನ ಪ್ರೇಮಾಲಿಂಗನದಿಂದ ನನಗೆ ಧನ್ಯತೆಯನ್ನು ದಯೆಪಾಲಿಸಬೇಕಾಗಿ ಬೇಡಿಕೊಳ್ಳುತ್ತೇನೆ.

[ವಿಠೂಮಹಾರನು ಬಾದಷಹನನ್ನೂ ದಾಮಾಜಿಪಂತನನ್ನೂ ಆಲಿಂಗಿಸುವನು.]

**ಸುಲ್ತಾನ್:**—ಪರಮಪುರುಷಾ! ನಿನ್ನ ಸ್ಪರ್ಶದಿಂದ ನನ್ನ ಹೃದಯವು ಪರಿಶುದ್ಧವಾಯಿತು. ಭಕ್ತಶಿಖಾಮಣಿ ದಾಮಾಜಿಪಂತರ ಸಂಬಂಧದಿಂದ ನಾನು ಧನ್ಯನಾದೆ!

**ದಾಮಾಜಿ:**—ವಿಠೋಬಾ! ಪಾಂಡುರಂಗಾ!! ಪುರುಷೋತ್ತಮಾ!!! ನಿನ್ನ ಅನುಗ್ರಹದಿಂದ ನಮ್ಮ ಜನ್ಮವು ಸಾರ್ಥಕವಾಯಿತು.

**ವಿಠೂ:**—ದಾಮಾಜಿ, ನನ್ನ ಪ್ರೇರಣೆಯಿಂದ ನಿನ್ನ ಧರ್ಮಪತ್ನಿಯಾದ ಸಾವಿತ್ರಿಯೂ ಸುಲೋಚನೆಯೂ ಇತ್ತ ಬರುತ್ತಲಿರುವರು, ನೋಡು!

[ಸಾವಿತ್ರಿಯು ಮತ್ತು ಸುಲೋಚನೆಯು ಪ್ರವೇಶಿಸುವರು.]

**ದಾಮಾಜಿ:**—(ಸಾವಿತ್ರಿಯನ್ನು ಕುರಿತು) ದೇವಿ, ಮೂರ್ತಿಮಂತನಾದ ವಿಠೋಬನು ಈಗ ಪ್ರತ್ಯಕ್ಷ ಇದಿರಿನಲ್ಲಿರುವ ವಿಠೂಮಹಾರನ ರೂಪದಿಂದ ನಾನು ಹಂಚಿದ ಧಾನ್ಯದ ಕ್ರಯವನ್ನು ಬಾದಷಹರಿಗೆ ತೆತ್ತನು. ಬಾದಷಹರ ಮನಶ್ಶಾಂತಿಗಾಗಿ ನನ್ನ ಪ್ರಾರ್ಥನೆಯಂತೆ ಅದೇ ರೂಪದಿಂದ ಪ್ರತ್ಯಕ್ಷನಾಗಿರುವ ಪರಮಾತ್ಮನನ್ನು ಚೆನ್ನಾಗಿ ನೋಡಿ ಆನಂದಿಸು.

**ಸಾವಿತ್ರಿ:**—ದೇವಾ, ಭಕ್ತಶಿಖಾಮಣಿಯಾದ ತಮ್ಮ ವಿಷಯದಲ್ಲಿ ಪಾಂಡುರಂಗನು ತೋರಿರುವ ವಾತ್ಸಲ್ಯವು ಅಸಾಧಾರಣವಾದುದೇ ಸರಿ.

**ವಿಠೂ:**—ಎಲೌ ಸಾಧ್ವೀಮಣಿಯೇ, ನಿನ್ನ ಪತಿಯೂ ನೀನೂ ಪುಣ್ಯಶಾಲಿಗಳು. ನಿಮ್ಮ ದೆಸೆಯಿಂದ ಈ ಬಾದಷಹನೂ ಆ ಸುಲೋಚನೆಯೂ ಪುಣ್ಯಶಾಲಿಗಳಾದರು. ಇದೋ, ನನ್ನ ನಿಜರೂಪವನ್ನು ನೋಡಿ ಆನಂದಿಸಿರಿ.

[ಕ್ಷೀರಶಾಯಿಯಾಗಿ ಲಕ್ಷ್ಮೀಧರನಾದ ನಾರಾಯಣನು ಪ್ರತ್ಯಕ್ಷನಾಗುವನು.]

**ದಾಮಾಜಿ:**—ಈ ಸುಯೋಗದಲ್ಲಿ ದೇವೇಶನ ಮಂಗಳವನ್ನು ಹಾಡೋಣ.

[ಎಲ್ಲರೂ ಹಾಡುವರು.]

### ಪದ ೩೫. (ಮಂಗಳಪದ)

ರಾಗ: ಪೂರ್ವಿ—ತ್ರಿವಟ

ಜಯ ಜಯ ಸುಗುಣಪ್ರಭಾವ, ಮಾಧವಾ ।
ಜಯ ಜಯ ಭಯಹರ, ಲೋಕಬಾಂಧವಾ ।
ಜಯ ದೇವರದೇವಾ ‖ ಪಲ್ಲ ‖

ಪ್ರಭುವರ, ಗಿರಿಧರ, ಜನನುತಚರಿತಾ ।
ಶುಭಕರ, ಸುಖಕರ, ಲಕ್ಷ್ಮಣವಿನುತಾ ।
ಅಭಯದ, ಘನಸನ್ನಿಭ, ಭಾಗ್ಯಯುತಾ ।
ವಿಭವದಿ ಶಾಂತಿಯ ನೀಡೈ ‖ ೧ ‖

[ಅಂಕದ ಫರದೆ ಬೀಳುವುದು.]

— ಇಂತಿದು ಪಂಚಮಾಂಕಂ —

## ಪರಿಸಮಾಪ್ತಿವಾಕ್ಯಂಗಳ್.

ಗುರುಪುರ ನರಸಿಂಹಾರ್ಯರ |
ವರಪುತ್ರಂ ಲಕ್ಷ್ಮಣಾಭಿದಂ ಕವಿಯೊರ್ವಂ ||
ವಿರಚಿಸಿದಂ ರೂಪಕದಿಂ |
ಸರಸದಿ ದಾಮಾಜಿಚರಿತೆಯಂ ಕನ್ನಡದೊಳ್ || ೧ ||

ಭಕ್ತವರೇಣ್ಯನ ಕಥೆಯಂ |
ಭಕ್ತಿಯೊಳೋದುತ್ತೆ ನಲಿವನಂ ಶ್ರೀಪತಿ ತಾಂ ||
ಭುಕ್ತಿಯುನುಂ ಮುಕ್ತಿಯುನುಂ |
ಭಕ್ತಪ್ರಿಯನಿತ್ತು ಪೊರೆವನೆಂಬುದು ಸಹಜಂ || ೨ ||

ಮಳೆಗರೆಗೆ ಮುಗಿಲ್ಕಾಲ |
ಕ್ಕೆಳೆ ನಳನಳಿಸಿರ್ಕೆ ಬೆಳೆಗಳಿಂ ಸಂತತಮುಂ ||
ಕಳಕಳವಿಲ್ಲದೆ ಈ ನಾ |
ಡುಳಿಯುಲಿ ಭಯುವಿಲ್ಲದಿರಲಿ ಬೊಮ್ಮರುವೆಂದುಂ || ೩ ||

|| ಶ್ರೀಕೃಷ್ಣಾರ್ಪಣಮಸ್ತು ||

— ಸಂಪೂರ್ಣಂ —